ಅದರಿಂದ ಮಾನವನು ಉನ್ನತಸ್ಥಿತಿಯನ್ನೈದುವನು, ಎಂಬುದು. ನೀತಿ
ಸ್ಥಿತಿಗೆ ಬೆಳೆದು ಈ ಪ್ರಾಮುಖ್ಯವನ್ನು ಪಡೆದಿರುವುದು ಹೇಗೆ? ಸಾಹಿತ್ಯದಿಂದಲ
ಹೌದು. ಮಾನವವರ್ಗವೂ ನೀತಿ ಎಂದು ಕರೆಯುವ ನಿಯಮ ಸಮುದಾ
ದಿನದಿಂದ ದಿನಕ್ಕೆ ವಿಸ್ತಾರವಾಗುತ್ತಿದೆ, ಜನದಿಂದ ಜನಕ್ಕೆ ಹರಡುತ್ತಿದೆ. ಮನುಷ್
ಸ್ವಭಾವದಲ್ಲಿ ಸೇರಿರುವ ಗುಣ ದೋಷಗಳೆಲ್ಲದರಿಂದ ದೋಷಗಳನ್ನು ಕಳೆಯ
ಮಾನವವರ್ಗದ ಉತ್ತಮ ಪ್ರಯತ್ನ ಸರ್ವದಾ ಉದ್ಯುಕ್ತವಾಗಿದೆ. ಈ ಪ್ರಯತ್ನ
ಮುಖ್ಯವಾದ ಸೂತ್ರಗಳೊಂದೆರಡನ್ನು ಭದ್ರವಾಗಿ ಹಿಡಿದು ಅವುಗಳಿಂದ ಆಯ
ಸಂದರ್ಭಕ್ಕೆ ತಕ್ಕ ನೀತಿಯನ್ನು ಗ್ರಹಿಸುತ್ತಾ ಇದೆ. ಸಂದರ್ಭಕ್ಕೆ ತಕ್ಕ ನೀತಿಯನ
ಗ್ರಹಿಸಿ ಅದನ್ನು ಪ್ರಚಾರಕ್ಕೆ ತರುವ ಕೆಲಸವು ಸಾಹಿತ್ಯಕ್ಕೂ ಸೇರಿದ್ದು. ಆದ್ದರಿ
ಸಾಹಿತ್ಯವು ಆಯಾ ಸಮಯದಲ್ಲಿ ಜನರು ನೀತಿ ಎಂದು ಹೇಳುವ
ನಿಯಮಗಳಿಗೇ ಗಮನ ಕೊಡಲಾಗುವುದಿಲ್ಲ. ಹೊಸ ಸಂದರ್ಭಗಳಲ್ಲಿ ಅದುವ
ನೆಲೆಸಿರುವ ನೀತಿಗೆ ವಿರೋಧವಾಗಿ ಹೋದಂತೆ ಕಂಡರೂ ಕಾಣಬಹುದ
ಸಾಮಾನ್ಯನು ನೀತಿ ಎನ್ನುವುದು ಮೂಲಸೂತ್ರಗಳಿಂದ ಸ್ಪಷ್ಟವಾಗಿ ಆವರೆಗೆ ಗ್ರಹಿ
ಕ್ರೋಡೀಕರಿಸಿರುವ ನಿಯಮ ಸಮುದಾಯ; ಇದು ಸ್ವಲ್ಪ ಭಾಗ ಮಾತ
ಗ್ರಂಥಕಾರನ ನೀತಿ ಆ ಸೂತ್ರಗಳ ಸಮಗ್ರ ಸಮುದಾಯ ಅವು ಎಷ್ಟು ವಿಸ್ತಾರವ
ಅದೂ ಅಷ್ಟು ವಿಸ್ತಾರ. ಅವು ಎಷ್ಟು ಉದಾರವೋ ಅದೂ ಅಷ್ಟು ಉದಾ
ಸಾಮಾನ್ಯನು ಸಾಮಾನ್ಯ ನೀತಿಯನ್ನು ಅನುಸರಿಸಬೇಕು. ಗ್ರಂಥಕಾರನು
ವಿಸ್ತಾರವಾದ ಉದಾರವಾದ ಮೂಲಮಂತ್ರ ಸಮ್ಮತವಾದ ನೀತಿಯನ
ಅನುಸರಿಸಬೇಕು, ಅದನ್ನು ಹಾಗೆ ಅನುಸರಿಸಿ ಸಾಮಾನ್ಯ ನೀತಿಯನ
ವಿಸ್ತಾರದಲ್ಲಿಯೂ ಔದಾರ್ಯದಲ್ಲಿಯೂ ಬೆಳೆಯುವಂತೆ ಮಾಡಬೇಕು.
ನಮ್ಮ ನೀತಿಯನ್ನು ಧಿಕ್ಕರಿಸಬೇಕೆಂದಲ್ಲ. ಅವನ ದೃಷ್ಟಿ ಅದನ್ನು ಒಳಗೊಂ
ಇನ್ನು ಸ್ವಲ್ಪ ಹೆಚ್ಚಾದ ನೀತಿಯನ್ನೂ ಒಳಗೊಂಡಿರಬೇಕೆಂದು ಈ ಅಭಿಪ್ರಾ
ಸರೋವರದಿಂದ ನಮ್ಮ ಕೆರೆಗೆ ನೀರನ್ನು ತರುವ ಕೊಳವೆಗಳೂ ಆ ಕೆರೆಯಿ
ನಮ್ಮ ಮನೆಗಳಿಗೆ ನೀರನ್ನು ತರುವ ಕೊಳವೆಗಳಂತೆ ಕೃಪಣಜೀವಿಗಳಾ

ಮ್ಮೆಲ್ಲರ ಗತಿಯೇನು? ಕವಿಯ ವಿಷಯದಲ್ಲಿ ನಾವು ಇದನ್ನು
ಜ್ಞಾಪಕದಲ್ಲಿಡಬೇಕು. ಅವನು ನೀತಿಯೆಲ್ಲದರ ಮೂಲವನ್ನು ಬಲ್ಲನು. ಅವನು
ಉದಾರಜೀವಿ. ಅವನ ಆತ್ಮ ಬಹುಜನ ಸೌಖ್ಯವನ್ನು ಆಶಿಸಬಲ್ಲುದು. ನಾವು
ಅವನಂತೆ ಅಲ್ಲದಿದ್ದರಿಂದ ನಮಗೆ ನೀತಿ ಎಂದು ತೋರದ ವಿಷಯವನ್ನು ಅವನು
ನೀತಿಯೆಂಬಂತೆ ವಿವರಿಸಿದರೂ ನಾವು ಅದಕ್ಕೆ ಮನ್ನಣೆಯನ್ನು ಕೊಡಬೇಕು,
ಸಾಧ್ಯವಿದ್ದಮ್ಮಟ್ಟಿಗೆ ನಮ್ಮಿಂದಾದರೆ ಅದನ್ನು ಗ್ರಹಿಸಿ ಅದರಂತೆ ನಡೆದು ಕೊಳ್ಳಬೇಕು.

## ಒಂದರೆಡು ಉದಾಹರಣೆ

ಇದಕ್ಕೆ ಉದಾಹರಣೆಯನ್ನು ಕೊಡುವುದು ಅವಶ್ಯಕವೋ ಅಲ್ಲವೋ
ತೋರಲಿಲ್ಲ. ಕೊಡುವುದಾದರೆ ಈ ಉಪನ್ಯಾಸದಿಂದ ದೂರವೆಂದು ತೋರುವ
ವಿಷಯವನ್ನು ಹೇಳಬೇಕಾಗುವುದು. ಆದರೂ ಈ ಮಾತಿನ
ಭಾವವಿಶದವಾಗುವುದಕ್ಕಾಗಿ ಒಂದೆರಡು ಉದಾಹರಣೆಯನ್ನು ಸೂಚಿಸಬಹುದು.
ಜನವೆಲ್ಲ ಭಗವಂತನ ಮಕ್ಕಳು, ನಾವು ಎಲ್ಲ ಒಡಹುಟ್ಟಿದವರು, ಎಂದರೆ
ಸರಳ ಹೃದಯರೆಲ್ಲ ಒಪ್ಪುವರು. ಇದು ಕ್ರೈಸ್ತಮತದ ಮೂಲತಂತ್ರ. ಈ
ಮತವನ್ನವಲಂಬಿಸಿದ ಜನಾಂಗಗಳು ಅಮೆರಿಕಾದಲ್ಲಿ ಕಪ್ಪು ಜನರನ್ನು
ದಾಸರಾಗಿಸಿಕೊಂಡು ಇದ್ದರು. ಆ ದಾಸರ ಅವಸ್ಥೆ ಎಷ್ಟು ಕೇಡಾಗಿತ್ತೆಂದು
ಹೇಳಬೇಕಾದದ್ದಿಲ್ಲ. ಇವರನ್ನು ಆ ಅವಸ್ಥೆಯಿಂದ ಬಿಡುಗಡೆ ಮಾಡುವುದಕ್ಕೆ
ಬಿಳಿಯ ಜನರಲ್ಲಿ ಮಹಾತ್ಮರು ಮಾಡಿದ ಪ್ರಯತ್ನವನ್ನು ವರ್ಣಿಸಲಾಗುವುದಿಲ್ಲ.
ನೀಗ್ರೋಗಳನ್ನು ದಾಸರಾಗಿ ಇರಿಸಿರುವುದೇ ಸರಿಯೆಂದು ಬಹು ಜನದ
ಮತವಾಗಿದ್ದಾಗ ಈ ಮಹಾತ್ಮರಲ್ಲಿ ಕೆಲವರು ಮಾತ್ರ ಅವರಿಗೆ ಬಿಡುಗಡೆಯನ್ನು
ಕೊಡಬೇಕೆಂದು ಹೇಳಿದರು. ಅವರ ನೀತಿ ಜನಾಂಗದ ಇತರ ಬಹು ಒಳ್ಳೆಯವರ
ನೀತಿಗೆ ವಿರೋಧವೆಂಬಂತೆ ಕಂಡಿರಬೇಕು. ನಮ್ಮಲ್ಲಿ ಗೀತೆಯ ಶ್ಲೋಕವನ್ನು
ಎಲ್ಲರೂ ಬಲ್ಲೆವು. "ಪಂಡಿತರು ಇದನ್ನೂ ಅದನ್ನೂ ಇನ್ನೊಂದನ್ನೂ
ಸಮದೃಷ್ಟಿಯಿಂದ ನೋಡುವರು." ಹಾಗಾದರೆ ಈ ವಿಷಯದಲ್ಲಿ ನಾವು ಆದಷ್ಟು
ಸಮದೃಷ್ಟಿಯಿಂದ ಇರೋಣವೆಂದು ; ಯಾರಾದರೂ ಹೇಳಿದರೆ ನಾವು ಅಂಥ

ಪಂಡಿತರಾಗಬೇಕಲ್ಲ ಎನ್ನುವೆವು. ಶಬರಿ ತಾನು ಭಕ್ಷಿಸಿ ಮಿಕ್ಕದ್ದಾದರು
ಕೊಟ್ಟಿದ್ದನ್ನು ರಾಮನು ತೆಗೆದುಕೊಂಡನೆಂದು ಹೇಳಿ ವಾಲ್ಮೀಕಿ ಮಹಾತ್ಮ್ಯವನ
ವರ್ಣಿಸಿದರೆ ನಾವು ಅದು ರಾಮನಿಗೆ ಸರಿ, ನಮಗೂ ಅದಕ್ಕೂ ಸಂಬಂಧವಿಲ
ಎನ್ನುವೆವು. ಹೆಚ್ಚು ಮಾತಾಡಿದರೆ ಸರಿಯಾದ ಹಣ್ಣು ಇರುವಾಗ ಎಂಜಲ
ಹಣ್ಣನ್ನು ಏಕೆ ತಿನ್ನಬೇಕು ಎನ್ನುವೆವು. ಕೊನೆಗೆ, ತಿನ್ನಬೇಕೆಂದರೆ ತಿನ್ನುಹೋಗು
ಬೇಡರವಳು ಎಂಜಲು ಮಾಡಿದ ಹಣ್ಣನ್ನೇ ತಿನ್ನು, ಎನ್ನುವೆವು. ನಮ್ಮ ನೀತಿ
ಇದು ವಿರೋಧ, ಕವಿಯ ನೀತಿಗೆ ಇದು ವಿರೋಧವಲ್ಲ. ನೀಗ್ರೋ ಜನರೂ
ಶಬರಿಯೂ, ಶ್ವೇತವರ್ಣ ಗೌರವರ್ಣದವರಂತೆಯೇ ಮನುಷ್ಯ ವರ್ಗದಲ್ಲಿ
ಸೇರಿದವರು, ದಯೆಗೆ ಅರ್ಹರು, ವಿಶ್ವಾಸಕ್ಕೆ ಅಧಿಕಾರಿಗಳು. ನಾವು ಒಪ್ಪ
ಅನೇಕ ವಿಷಯಗಳಲ್ಲಿ ಅವರಿಗೆ ಕವಿ ಈ ಸಮಾನತ್ವವನ್ನು ಕೊಡುವನು; ಅವರನ
ತನ್ನ ಒಡಹುಟ್ಟಿದವರಂತೆ ಕಾಣುವನು. ನಾವು ಇಟ್ಟುಕೊಂಡಿರುವ ಭೇದಗಳನ
ಎಲ್ಲವನ್ನೂ ಅವನು ಕಾವ್ಯದಲ್ಲೂ ಗೌರವಿಸಬೇಕೆಂದರೆ ಸಾಹಿತ್ಯ ತನ
ಕರ್ತವ್ಯದಲ್ಲಿ ಭ್ರಷ್ಟತೆಯನ್ನು ಹೊಂದುವುದಲ್ಲದೆ ಜನರು ಎಂದಿಗಾಗಲಿ ಸ್ವ
ಮುಂದಕ್ಕೆ ಬಂದಾರೆ ಎಂಬ ಆಸೆಯೇ ನಿರ್ಮೂಲವಾಗುವುದು.

## ೨೦. ಚರ್ಚೆಯ ಫಲ

ಉತ್ತಮ ಸಾಹಿತ್ಯ ಉದಾತ್ತ ನೀತಿಯನ್ನು ಸಾಧಿಸುವುದು

ಮುಖ್ಯವಾಗಿ ನಾವು ನೆನಪಿನಲ್ಲಿಟ್ಟುಕೊಳ್ಳಬೇಕಾದ ವಿಷಯವೇನೆಂದರ
ಸಾಹಿತ್ಯವೆನ್ನುವುದು ಬರಿಯ ಪುಸ್ತಕಗಳ ಸಮುದಾಯವಲ್ಲ. ಅದರ ಮೊದಲ
ಮಾನವ ಹೃದಯದಲ್ಲಿ; ಅದರ ಕೊನೆ ಮಾನವ ಹೃದಯದಲ್ಲಿ. ಕಾವ್ಯವು ಕ
ಮತ್ತು ಪಾಠಕರ ಮನಸ್ಸಿಗೆ ಸಂಬಂಧವನ್ನುಂಟುಮಾಡುವ ಸಾಧನ. ಉತ್ತ
ಸಾಹಿತ್ಯವು ಮೂಲದಲ್ಲಿ ಉತ್ತಮವಾಗಿರಬೇಕು, ರೂಪದಲ
ಉತ್ತಮವಾಗಿರಬೇಕು, ಅಂತ್ಯದ ಫಲದಲ್ಲಿ ಉತ್ತಮವಾಗಿರಬೇಕು, ಇದನ
ಗ್ರಹಿಸಿದರೆ ಗ್ರಂಥಕರ್ತನು ತನ್ನ ಸ್ವಾತಂತ್ರ್ಯಕ್ಕಾಗಿ ಎಷ್ಟು ಆತುರದಿಂ

ೂಡೆದಾಡುವನೋ ಅಷ್ಟು ಆತುರದಿಂದ ಪಾಠಕರ ಕ್ಷೇಮವನ್ನು
ೋಚಿಸುವನು. ಪಾಠಕನು ತನ್ನ ಕ್ಷೇಮವನ್ನು ಕುರಿತು ಎಷ್ಟು ಶ್ರದ್ಧೆಯಿಂದ
ೋಚಿಸುವನೋ ಅಷ್ಟೂ ಶ್ರದ್ಧೆಯಿಂದ ಗ್ರಂಥಕರ್ತನಿಗೆ ಸ್ವಾತಂತ್ರ್ಯವನ್ನು
ಡಲು ಒಪ್ಪುವನು. ಒಬ್ಬರನ್ನೊಬ್ಬರು ವಿರೋಧಪಕ್ಷವೆಂದು ಎಣಿಸರು. ಸಾಹಿತ್ಯ
ನಾಗಿಯೇ ಉತ್ತಮ ಸ್ಥಿತಿಗೆ ಬಂದು ತನ್ನ ಕರ್ತವ್ಯವನ್ನು ನೆರವೇರಿಸುವುದು.
ೀಗಾಗುವುದರಿಂದ ಜನಾಂಗ ಮುಂದಕ್ಕೆ ಬರುವುದು. ನೀತಿಯನ್ನು
ಯುಸುವವರೂ, ಈ ಸಂದರ್ಭದಲ್ಲಿ ಯಾವ ಶಂಕೆಯನ್ನೂ
ಟ್ಟುಕೊಳ್ಳಬೇಕಾದದ್ದಿಲ್ಲ. ನೀತಿಯೆನ್ನುವುದು ಬುದ್ಧಿಗೆ ಸಮ್ಮತವಾದ ನಿಯಮ.
ಾಹಿತ್ಯದ ರಸವು ರಾಗವರ್ಗಕ್ಕೆ ಸಮ್ಮತವಾದ ವಸ್ತುಲಕ್ಷಣ. ಸಾಹಿತ್ಯ ತನ್ನ
ರ್ತವ್ಯವನ್ನು ಸರಿಯಾಗಿ ನೆರವೇರಿಸಿದರೆ ಬುದ್ಧಿಯಿಂದ ಒಪ್ಪಬಹುದಾದ ಫಲ
ರುವುದೇ ಹೊರತು ಬೇರೆಯಿಲ್ಲ. ಎಂದರೆ ಅದು ನೀತಿಗೆ
ರೋಧವಾಗಿರಲಾರದು. ಸತ್ಯವು ಸೌಂದರ್ಯವೂ ಒಂದೇ ಎಂಬ ಮಾತಿನಲ್ಲಿ
ದು ಅಡಕವಾಗಿದೆ. ಸಾಹಿತ್ಯವು ಸೌಂದರ್ಯವನ್ನು ಸಾಧಿಸುವುದೆಂದೂ ಅದು
ತ್ಯ ಸ್ವರೂಪವಾದ ಪರವಸ್ತುವಿನ ಬೇರೊಂದು ಮುಖವೆಂದೂ ಈ ಮೊದಲೇ
ರ್ಧಾರವಾಗಿದೆ.

### ಈ ವಿಷಯದಲ್ಲಿ ಜನರ ಕರ್ತವ್ಯ.

ಸಾಹಿತ್ಯದ ಸರಿಯಾದ ಅರ್ಥವನ್ನು ತಿಳಿಯುವುದಕ್ಕೆ ಇಷ್ಟು ಚರ್ಚೆ ಬೇಕೆ
ಂದು ಕೇಳಬಹುದು. ಚರ್ಚೆಬಾರದ ಸಾಹಿತ್ಯದ ವಿಷಯದಲ್ಲಿ ಈ ಚರ್ಚೆ
ಂದೂ ಬೇಕಾದದ್ದಿಲ್ಲ. ಅದು ಬಂದಾಗ್ಯೆ ಈ ಆಕ್ಷೇಪಗಳೂ ಸಮಾಧಾನಗಳೂ
ರುವುವು. ಮನುಷ್ಯನು ಬುದ್ಧಿಯನ್ನೂ ರಾಗವನ್ನೂ ಉಳ್ಳವನು. ರಾಗದ
ಲಗಳಾದ ಕುಶಲಕಲೆಗಳು ಕೂಡ ಬುದ್ಧಿಯ ಮಾರ್ಗಕ್ಕೆ ತೀರ ವಿರೋಧವಾಗಿ
ಡೆಯಬಾರದು, ನಡೆಯುವುದಾದರೆ, ಅವು ಸರಿ, ಬುದ್ಧಿಯ ನೆಪ್ಪುತಪ್ಪು
ಂಬುದು ತೋರುವಂತೆಯಾದರೂ ಇರಬೇಕು. ಒಂದು ಭಾಗ ನಿಜವಾಗಿ
ಳ್ಳೆಯದಾಗಿದ್ದರೆ, ಹತ್ತು ಭಾಗ ಕೆಟ್ಟುದಾಗಿರುತ್ತದೆ ದಿನೇದಿನೇ ಕ್ಷುದ್ರ ಗ್ರಂಥಗಳ

ಸಂಖ್ಯೆ ಹೆಚ್ಚುತ್ತಿದೆ. ಬರೆಯುವ ಪುಸ್ತಕಗಳ ಹತ್ತರಲ್ಲಿ ಒಂದೋ ಅರ್ಧವೊ
ಒಳ್ಳೆಯವು. ಈ ಹತ್ತು ಪುಸ್ತಕಗಳ ಜೊತೆಗೆ ಸೇರಿರುವ ಆ ಒಂದು ಪುಸ್ತಕವನ್ನು
ಗುರುತಿಸುವುದು ಹೇಗೆ? ಉತ್ತಮ ಸಾಹಿತ್ಯದ ಲಕ್ಷಣಗಳನ್ನು ಸರಿಯಾಗಿ
ತಿಳಿದರೆಯೇ ಇದು ಸಾಧ್ಯ. ಹೀಗಿಲ್ಲದಿದ್ದರೆ ಕೆಟ್ಟ ಪುಸ್ತಕಗಳ ಜೊತೆಗೆ ಒಳ್ಳೆಯ
ಪುಸ್ತಕವೂ ಹೋಗುವುದು, ಕುಶಲಕಲೆ ಜನರ ಜೀವನದಲ್ಲಿ ತನ್ನ ಸ್ಥಾನವನ್ನು
ಕಳೆದುಕೊಳ್ಳುವುದು. ನಮಗೆ ತಿಳಿದಹಾಗೆ ಸಂಗೀತವು ಸಾಹಚರ್ಯದ ಕಾರಣದಿಂದ
ನಮ್ಮ ಜೀವನದಲ್ಲಿ ತಾನು ಇಟ್ಟುಕೊಂಡಿರಬೇಕಾದ ಸ್ಥಾನವನ್ನು
ಇಟ್ಟುಕೊಂಡಿಲ್ಲ. ನಾವು ಅಜಾಗರೂಕರಾದರೆ ಹೀಗೆಯೇ ಸಾಹಿತ್ಯವೂ ತನ್ನ
ಸ್ಥಾನವನ್ನು ಕಳೆದುಕೊಂಡೀತು. ಇದೂ ತನ್ನ ಸ್ಥಾನವನ್ನು ಕಳೆದುಕೊಂಡರೆ ಇನ್ನು
ಜನಾಂಗದಲ್ಲಿ ರಾಗಸಂಸ್ಕಾರಕ್ಕೆ ಸಾಧನವೇ ಇಲ್ಲವಾಗುವುದು. ಈ ದುರವಸ್ಥೆ
ಬರದೆ ಇರಲಿ ಎನ್ನುವರು ಉತ್ತಮ ಸಾಹಿತ್ಯವನ್ನು ತಿಳಿದು ಅದನ್ನು ಉತ್ತಮ
ಪದವಿಯಲ್ಲಿರಿಸಿ ಅದರಿಂದ ಮಾತ್ರ ಸಾಧ್ಯವಾದ ಸಂಸ್ಕಾರವನ್ನು ಜನಾಂಗಕ್ಕೆ
ಉಳಿಸಬೇಕು.

V

# ಸಾಹಿತ್ಯದ ಸಾಮಗ್ರಿರೂಪ ಇತ್ಯಾದಿ

೨೧.

ಇದುವರೆಗೆ ಸಾಹಿತ್ಯದ ಕಾರ್ಯ, ಸಾಹಿತ್ಯ ಅದನ್ನು ಸಾಧಿಸುವ ರೀತಿ, ಈ ಕಾರ್ಯದ ದೆಸೆಯಿಂದ ಸಾಹಿತ್ಯವು ಜನಾಂಗದ ಜೀವನದಲ್ಲಿ ಯಾವ ಉನ್ನತ ಸ್ಥಾನಕ್ಕೆ ಅಧಿಕಾರಿಯಾಗಿದೆ ಎಂಬುದು, ಇದನ್ನು ಸೂಕ್ಷ್ಮವಾಗಿ ಹೇಳಿದೆ. ಇದೆಲ್ಲದರ ಮುಖ್ಯವಾದ ಆಶಯವು ಸಾಹಿತ್ಯಕ್ಕೆ ಸರಿಯಾದ ಗೌರವವನ್ನು ಕೊಡಬೇಕೆಂಬುದನ್ನು ನಿರೂಪಿಸುವುದು. ಅದಕ್ಕೆ ಸೇರಿದ ಹಾಗೆ ಈ ವಿಷಯಗಳನ್ನು ತಿಳಿಯುವುದರಿಂದ ಇನ್ನೊಂದು ಪ್ರಯೋಜನ ಉಂಟು. ಸಾಹಿತ್ಯ ಪಠನದಿಂದ ಅಧಿಕವಾದ ಸುಖವನ್ನು ಪಡೆಯುವುದು ಸಾಧ್ಯವಾಗುವುದೇ ಈ ಪ್ರಯೋಜನ. ಸಾಹಿತ್ಯದ ಸರಿಯಾದ ಸ್ಥಾನವನ್ನು ನಿರ್ಧರಿಸುವುದಕ್ಕಿಂತ ಇದು ಬಹು ಕಡಮೆಯಾದ ಪ್ರಯೋಜನವೆಂದು ಹೇಳಲಾಗುವುದಿಲ್ಲ. ಓದುವವರ ಸುಖದಿಂದ ಸಾಹಿತ್ಯ ಸಫಲವಾಗುತ್ತದೆ. ಯಾವುದಾದರೊಂದು ಪುಸ್ತಕವನ್ನು ಸಾಧ್ಯವಾದಷ್ಟು ಸುಖ ಪಡೆಯುವಂತೆ ಓದಬೇಕಾದರೆ ತಿಳಿದಿರಬೇಕಾದ ಇನ್ನು ಕೆಲವು ವಿಷಯಗಳನ್ನು ಈಗ ಹೇಳಲು ಯತ್ನಮಾಡಿದೆ.

## ೨೨. ಕಾವ್ಯದ ಸಾಮಗ್ರಿ

### ಕಾವ್ಯದ ವಸ್ತು ಕವಿಯ ಭಾವನೆ.

ಈ ವಿಷಯಗಳಲ್ಲಿ ಮೊದಲನೆಯದು ಕಾವ್ಯದ ಸಾಮಗ್ರಿ ಯಾವುದು ಎಂಬುದು. ಕಾವ್ಯವನ್ನು ಬರೆಯುವುದಕ್ಕೆ ಕವಿ ಉಪಯೋಗಿಸುವ ಸಾಮಗ್ರಿಯಾವುದು ಎಂದರೆ ಒಟ್ಟಿನಲ್ಲಿ ಅವನ ಭಾವಗಳು ಎಂದು ಹೇಳಬಹುದು. ಎಷ್ಟು ಹೇಳಿದರೂ ಮೊತ್ತವೇನೋ ಇಷ್ಟೇ. ಆದರೆ ಈ ಮಾತಿನ ಅರ್ಥವನ್ನು ವಿವರವಾಗಿ ತಿಳಿಯುವುದು ಅವಶ್ಯಕ. ಕವಿಯ ಮನಸ್ಸಿನಲ್ಲಿ ಭಾವಗಳು ಉತ್ಪನ್ನವಾಗಿ ಅವುಗಳಿಂದ ಅವನ ಹೃದಯ ತುಂಬಿದಾಗ ಅದನ್ನು

ವ್ಯಕ್ತಗೊಳಿಸುವುದು ಕವಿಗೆ ಅವಶ್ಯ ಕರ್ಮವಾಗುವುದು. ಭಾವಗಳ ಉತ್ಪತ್ತಿ
ಮುಖ್ಯವಾದ ಇನ್ನೊಂದು ಮೂಲ ಆಲೋಚನೆ. ಮೊದಲನೆಯದು ಕವಿಯ
ಸ್ವಾನುಭವ. ಎರಡನೆಯದು ಅವನು ಪ್ರತಿಭಾಶಕ್ತಿಯಿಂದ ತನ್ನ ವಿಷಯದಲ್ಲಿಯು
ಇತರರ ವಿಷಯದಲ್ಲಿಯೂ ತಿಳಿಯಬಹುದಾದದ್ದು. ಇತರರಿಗಿರುವುದಕ್ಕಿಂ
ಕವಿಗೆ ಜ್ಞಾನೇಂದ್ರಿಯ ಕರ್ಮೇಂದ್ರಿಯಗಳ ಪಾಟವ ಅಧಿಕವಾಗಿರುವುದೆಂದು
ಅವನು ಪ್ರಪಂಚದ ಸೌಂದರ್ಯದಲ್ಲಿ ದೇವರ ಸೌಂದರ್ಯವನ್ನು ಕಾಣುವುದ
ತಾಯನ್ನು ಮಗು ತಿಳಿಯುವ ರೀತಿಯಿಂದ ಎಂದೂ ಈ ಮೊದಲೇ ಹೇಳಿದೆ
ಕೇವಲ ಪಾಟವದ ಆಧಿಕ್ಯವಲ್ಲದೆ ಕವಿಯ ನೋಟದಲ್ಲಿ ಒಂದು ವಿವೇಚನಾ
ಶಕ್ತಿಯೂ ಸೇರಿರುತ್ತದೆ. ಪಾಟವದ ಆಧಿಕ್ಯವಲ್ಲದ ಅನುಭವ ತೀವ್ರವಾಗುವುದು
ವಿವೇಚನೆಯಿಂದ ಅದರ ಲಕ್ಷಣ ತಿಳಿಯುವುದು. ನಾವೆಲ್ಲ ಪ್ರಪಂಚದಲ್ಲಿರುವುದು
ತಾಯನ್ನು ತಿಳಿಯದೆ ಸುಮ್ಮನೆ ಅವಳ ಕೈಯಲ್ಲಿ ಇರುವ ಮಗುವಿನಂತೆ. ಅಂತಹ
ಮಗುವಿಗೆ ತಾಯ ಆಕಾರವು ಸುತ್ತಣ ಪ್ರಂಪಚದಲ್ಲಿ ಲೀನವಾಗಿ ಹೋಗಿರುವುದು
ಅದು ಆ ಆಕಾರದ ಮೇರೆಯನ್ನು ತಿಳಿಯಲಾರದು. ಅದನ್ನು ಅದರ ಸುತ್ತಣ
ಆವರಣದಿಂದ ಬೇರೆಯಾಗಿ ಕಾಣಲಾರದು. ನಮ್ಮ ಪ್ರಪಂಚಜ್ಞಾನ ಇಂಥದು
ಒಂದು ಹೂವನ್ನು ನೋಡಿದೆವು; ಒಂದು ಕೊಳವನ್ನು ನೋಡಿದೆವು. ಆ ಹೂವು
ಅದರ ಪಕ್ಕದ ಒಣ ಎಲೆಯೂ ಸೇರಿಯೇ ನಮ್ಮ ಕಣ್ಣಿಗೆ ಕಾಣುವುವು; ನಮ್ಮ
ಮನಸ್ಸನ್ನು ಪ್ರವೇಶಿಸುವುವು. ಕೊಳವೂ ಅದರ ಪಕ್ಕದ ಒಣಕಡ್ಡಿಯ ಬೇಲಿಯೂ
ನಮಗೆ ಏಕರೀತಿಯ ಪ್ರಾಮುಖ್ಯವನ್ನು ತಳೆಯುವುವು. ನಾವು ಪ್ರಪಂಚದ
ಸೌಂದರ್ಯವನ್ನು ಅದರ ಸುತ್ತಣ ಆವರಣದಿಂದ ಪ್ರತ್ಯೇಕಿಸಿ ತಿಳಿಯಲಾರೆವು
ಸೌಂದರ್ಯದೊಂದಿಗೆ ಆವರಣವೂ ಸೇರಿ ನಮಗೆ ಎರಡೂ ಅಸ್ಪಷ್ಟವಾಗುತ್ತದೆ
ಕವಿಗೆ ಹೀಗೆ ಇರುವುದಿಲ್ಲ. ದಿನ ಕಳೆದು ತಾಯ ಆಕಾರವನ್ನು ಸ್ಪಷ್ಟವಾಗಿ
ತಿಳಿದಿರುವ ಮಗುವಿನಂತೆ ಅವನು ಈ ಪ್ರಪಂಚದ ಆವರಣದಲ್ಲಿ ಲೀನವಾಗಿರುವ
ಪರವಸ್ತುವಿನ ಆಕಾರವನ್ನು ಪ್ರತ್ಯೇಕಿಸಿ ತಿಳಿಯುವನು. ಅವನು ಆವರಣ
ಆಕಾರಗಳಿಗೆ ಅದಕ್ಕಾಗಿ ತಕ್ಕ ಪ್ರಾಮುಖ್ಯವನ್ನು ಕೊಡಬಲ್ಲನು. ಈ ಶಕ್ತಿ ಸುಮ್ಮನೆ

ದಿನ ಕಳೆದ ಮಾತ್ರಕ್ಕೆ ಬರುವುದೂ ಅಲ್ಲ. ಪ್ರಯತ್ನದಿಂದಲೂ ಕಲಿವಿನಿಂದಲೂ ಬರುವುದು. ಇದು ಹೇಗೆಂಬುದು ಚಿತ್ರವನ್ನು ನೋಡುವ ರೀತಿಯಿಂದ ವಿವರವಾಗಬಹುದು. ಚಿತ್ರದಲ್ಲಿ ಅಭಿರುಚಿಯೂ ಪರಿಜ್ಞಾನವು ಕಡಮೆಯಾದವರಿಗೆ ಚಿತ್ರ ಒಂದರಲ್ಲಿ ಇರುವ ವಸ್ತುವೆಲ್ಲಾ ಒಂದೇ ಕ್ಷೇತ್ರದಲ್ಲಿರುವಂತೆ ಕಾಣಬಹುದು. ಅದರಲ್ಲಿ ಆಕಾಶ, ಭೂಮಿ, ಮರ,ಜನ,ಎಲ್ಲವೂ ಉದ್ದ ಅಗಲ ಉಳ್ಳವಾಗಿರುವುವೇ ಹೊರತು ಗಾತ್ರವನ್ನು ಹೊಂದಿರುವುದಿಲ್ಲ. ಚಿತ್ರವನ್ನು ಬಲ್ಲವನು ಎರಡೇ ಅಳತೆಯುಳ್ಳುದಾದರೂ ಅದರಲ್ಲಿಯ ಮನುಷ್ಯಾಕಾರಕ್ಕೆ ಮೂರನೆಯ ಅಳತೆಯೊಂದನ್ನು ಸೇರಿಸಿಕೊಂಡು ಅದರ ನಿಜವಾದ ಸೌಂದರ್ಯವನ್ನು ಅನುಭವಿಸುವನು. ಅಲ್ಲದೆ ಅವನಿಗೆ ಒಂದು ಕ್ಷೇತ್ರದಲ್ಲಿ ತಿದ್ದಿರುವ ಹತ್ತಾರು ಆಕಾರ ಅದದಕ್ಕೆ ಸೇರಿದ ಬೇರೆ ಬೇರೆ ಕ್ಷೇತ್ರಗಳಲ್ಲಿ ಪ್ರತಿಷ್ಠೆಯಾಗಿ ಕಾಣುವುದು. ಕೊಳ,ಮರ. ಗದ್ದೆ, ಆಮೇಲೆ ಕಾವಲು,ಅದರಲ್ಲಿಯ ದನ, ಅವುಗಳ ನಡುವೆ ಕೊಳಲು ಗೋಪಾಲ. ಚಪ್ಪಟೆಯಾಗಿರುವ ಚಿತ್ರ ಅವನಿಗೆ ಹೀಗೆ ಘನವಾಗಿ ಕಾಣುವುದು. ಕವಿಗೆ ಪ್ರಪಂಚ ಕಾಣುವುದು ಈ ರೀತಿಯಲ್ಲಿ. ಈ ಸಾಮ್ಯಗಳಿಂದ ವಿವರಿಸಬೇಕೆಂದು ಯತ್ನಿಸಿರುವ ವಿಷಯ ಇದು. ಪ್ರಪಂಚದ ವಿಷಯವನ್ನು ತಿಳಿಯುವುದಕ್ಕೆ ಕವಿಯಲ್ಲಿ ಇಂದ್ರಿಯಪಾಟವ ಅಧಿಕವಾಗಿರುವುದಲ್ಲದೆ ಆ ತಿಳುವಿನ ಶಕ್ತಿಯಲ್ಲಿ ಒಂದು ವಿಶೇಷ ಗುಣವೂ ಉಂಟು. ಪಾಟವದ ಈ ಅಧಿಕ್ಯದ ದೆಸೆಯಿಂದಲೂ ಶಕ್ತಿಯ ಈ ವಿಶೇಷ ಗುಣದಿಂದಲೂ ಕವಿಯ ಆತ್ಮದ ಅನುಭವವೆನ್ನುವುದು ಇತರರ ಅನುಭವಕ್ಕಿಂತ ಕೆಲವು ಹೆಚ್ಚು ಲಕ್ಷಣಗಳನ್ನುಳ್ಳದ್ದಾಗಿರುವುದು. ಕವಿಗೆ ತನ್ನ ಅನುಭವ ಹೀಗೆ ವಿಶೇಷ ಗುಣಗಳಿಂದ ಕೂಡಿರುವುದಲ್ಲದೆ, ಇತರರ ಕಷ್ಟಸುಖವೂ ಒಂದು ರೀತಿಯಲ್ಲಿ ಹೆಚ್ಚು ವಿಶದವಾಗಿ, ಹೀಗೆಯೇ ಅನುಭವಕ್ಕೆ ಬರುವುದು. ಇದು ಅವನ ಊಹೆಯಿಂದ ಬರತಕ್ಕ ಶಕ್ತಿ. ಇದರಿಂದ ಅವನು ತನ್ನ ಕಷ್ಟಸುಖಗಳನ್ನು ಹೇಗೆ ಕಾವ್ಯದಲ್ಲಿ ವರ್ಣಿಸಬಹುದೋ ಹಾಗ ಇತರರ ಕಷ್ಟಸುಖಗಳನ್ನೂ ಭಾವ ಅನುಭವಗಳನ್ನೂ ವರ್ಣಿಸಬಹುದು. ಮನುಷ್ಯನ

ಸ್ವಭಾವದಲ್ಲಿ ಊಹೆ ಕಾವಲಿಸಲ್ಲಿ ತಿಳಿನೀರಿನ ಕೊಳೆದಂತೆ ಬಿಂಬಧಾರಣ ಶಕ್ತಿಯನ್ನುಳ್ಳದು. ಇದು ಎಲ್ಲರಿಗೂ ಸಾಕಾದಷ್ಟು ಇರುವುದಿಲ್ಲ. ಆದರ ಸ್ವಲ್ಪದಿಂದ ಪಡೆಯುವ ಫಲವನ್ನು ಎಲ್ಲರೂ ಪಡೆಯಬಹುದು. ಅದರ ವಿಪುಲತೆಯಿಂದ ಸಾಧ್ಯವಾದ ಪೂರ್ಣಾನುಭೂತಿ ಕವಿಗೆ ಮಾತ್ರ ಲಭ್ಯ. ಚಂದ್ರನ ಪ್ರಭೆಯಿಂದ ಮೈದಾನವೆಲ್ಲ ಆನಂದಮಯವಾಗಿದ್ದರೂ ಅವನನ್ನು ಬಿಂಬವಾಗಿ ಧರಿಸುವುದು ಮೈದಾನದ ನಡುವಣ ಸ್ವಚ್ಛ ಜಲಪಾತಕ್ಕೆ ಮಾತ್ರ ಸಾಧ್ಯ. ಹೀಗೆ ಕವಿ ತನ್ನ ಊಹೆಯ ಶಕ್ತಿಯಿಂದ ಇತರರ ಅನುಭವವನ್ನು ತನ್ನದೆಂಬಂತೆ ಗ್ರಹಿಸಬಲ್ಲನು. ಹೀಗೆ ಎರಡು ವಿಧವಾದ ಅನುಭವದಿಂದಲೂ ಕವಿಯ ಹೃದಯದಲ್ಲಿ ಭಾವಗಳು ಪ್ರಾದುರ್ಭವಿಸಿ ಕಾವ್ಯಕ್ಕೆ ಸಾಮಗ್ರಿಯಾಗುವುವು.

## ವಿಷಯವನ್ನನುಸರಿಸಿ ರೀತಿಗಳು

ಈ ಎರಡು ರೀತಿಯ ಸಾಮಗ್ರಿಗಳನ್ನನುಸರಿಸಿ ಎರಡು ರೀತಿಯ ಕಾವ್ಯಗಳು ಉಂಟಾಗುವುವು. ಇವುಗಳನ್ನು ಇಂಗ್ಲೀಷಿನಲ್ಲಿ ಲಿರಿಕ್ ಎಂದೂ ಡ್ರಮ್ಯಾಟಿಕ್ ಎಂದೂ ಕರೆಯುತ್ತಾರೆ. ಲಿರಿಕ್ ಎಂಬುದು ಗೀತೆಗಳ ಹೆಸರು,ಡ್ರಮ್ಯಾಟಿಕ್ ಎಂಬುದು ದೃಶ್ಯಕಾವ್ಯಗಳ ಹೆಸರು. ಲಿರಿಕ್ ಎನ್ನುವುದು ಮುಖ್ಯವಾಗಿ ಕವಿಯ ಸ್ವಂತದ ಅನುಭವವನ್ನು ಕುರಿತದ್ದು. ಡ್ರಮ್ಯಾಟಿಕ್ ಎನ್ನುವುದು ಇತರರ ಅನುಭವವನ್ನು ವರ್ಣಿಸ ತಕ್ಕದ್ದು. ಕೃತಿಗಳಿಗೆ ಈ ಹೆಸರುಗಳು ಬರುವುದಕ್ಕೆ ಕಾರಣವೇನೆಂದು ಈ ಹೆಸರುಗಳಿಂದಲೇ ಗೊತ್ತಾಗುವುದು. ಕವಿ ಯಾವನೇ ಆಗಲಿ ಸ್ವಾನುಭವವನ್ನು ಹೇಳಬೇಕಾದರೆ ಪ್ರಾಯಶಃ ಏಕರಸಪ್ರಮುಖವಾದ ಒಂದು ಕೃತಿಯನ್ನು ರಚಿಸುವನು. ನಾಟಕದಲ್ಲಿ ಇತರರ ನಡೆನುಡಿಗಳನ್ನು ವರ್ಣಿಸುವುದೇ ಮುಖ್ಯ ಉದ್ದೇಶ. ಅದು ಅದರ ರೂಪದಲ್ಲೂ ವ್ಯಕ್ತವಾಗುತ್ತದೆ. ಇದರಿಂದ ಆಯಾ ಗ್ರಂಥ ಸಮುದಾಯಕ್ಕೂ ಅದರಲ್ಲಿ ಮುಖ್ಯವಾದ ಕಾವ್ಯರೂಪದ ಹೆಸರನ್ನು ಕೊಟ್ಟಿದ್ದಾರೆ. ನಾವು ಇಲ್ಲಿ ಅವುಗಳನ್ನು ವ್ಯಂಜಕ ಕಾವ್ಯಗಳೆಂದೂ ವರ್ಣನಾ ಕಾವ್ಯಗಳೆಂದೂ ಕರೆಯಬಹುದು. ತನ್ನ ಅಂತರಂಗವನ್ನು ಹೇಳತಕ್ಕದ್ದು ವ್ಯಂಜಕ ಕಾವ್ಯ, ಇತರರನ್ನು ವರ್ಣಿಸತಕ್ಕದ್ದು ವರ್ಣನಾಕಾವ್ಯ. ಇವು ಕೇವಲ

ಸಂಕೇತದ ಹೆಸರುಗಳೇ ಹೊರತು, ಈ ಮಾತುಗಳಲ್ಲಿ ಪರಸ್ಪರ ವಿರೋಧ ಭಾವಗಳು ಇವೆ ಎಂದು ತಿಳಿಯಬಾರದು. ಕಾವ್ಯಗಳನ್ನು ಹೀಗೆ ವಿಭಾಗಿಸಿಕೊಳ್ಳುವುದರಲ್ಲಿ ಉಪಯೋಗವೇನೆಂದರೆ ಯಾವುದಾದರೂ ಒಂದು ಕಾವ್ಯವನ್ನು ತೆಗೆದುಕೊಂಡರೆ ಅದರಲ್ಲಿ ಎಷ್ಟೆಷ್ಟು ಭಾಗ ಈ ಎರಡು ರೀತಿಯದು ಎಂದು ತೋರಿ ಒಂದೊಂದರ ಭಾವವು ಚೆನ್ನಾಗಿ ತಿಳಿಯುವುದು. ಎರಡು ರೀತಿಯ ಕಾವ್ಯಗಳೆಂದ ಮಾತ್ರಕ್ಕೆ ಪ್ರತಿಯೊಂದು ಕಾವ್ಯವೂ, ಇಲ್ಲ ಈ ತರಗತಿಗೆ, ಇಲ್ಲ ಆ ತರಗತಿಗೆ ಸೇರಿದ್ದಾಗಿರಬೇಕೆಂದು ಅರ್ಥವಲ್ಲ. ಒಂದೇ ಕಾವ್ಯದಲ್ಲಿ ಈ ಎರಡು ರೀತಿಯ ಭಾಗಗಳೂ ಇರುವುದು ಸಾಧ್ಯ. ಏಕೆಂದರೆ ಒಂದೇ ಗ್ರಂಥದಲ್ಲಿ ಕವಿಯು ತನ್ನ ಅನುಭವವನ್ನೂ ವರ್ಣಿಸಬಹುದು, ಇತರರ ನಡೆನುಡಿಗಳನ್ನೂ ಚರ್ಚಿಸಬಹುದು. ಅಲ್ಲದೆ ತನ್ನ ಅನುಭವ ಇತರರ ಅನುಭವ ಅಥವಾ ನಡೆನುಡಿ ಎಂದಿರುವುದರಿಂದ ಕಾವ್ಯದ ಸಾಮಗ್ರಿ ಇತರರ ಅನುಭವವಾಗಿರಬಹುದೆಂದು ತಿಳಿಯಬಾರದು. ಇತರರ ನಡೆನುಡಿ ಕಾವ್ಯದ ವಿಷಯವಾದರೂ ಕಾವ್ಯದ ಸಾಮಗ್ರಿ ಆ ನಡೆನುಡಿಯ ವಿಷಯದಲ್ಲಿ ಕವಿಗೆ ಇರುವ ಭಾವವೇ. ಎರಡು ರೀತಿಯ ಗ್ರಂಥದಲ್ಲೂ ಸಾಮಗ್ರಿಯೇನೋ ಕವಿಯ ಭಾವವೇ, ಆದರೆ ಭಾವದ ವಿಷಯವಾದ ವಸ್ತು ಆತ್ಮಗತವಾದದ್ದಾಗಿರಬಹುದು ಅಥವಾ ಇತರರನ್ನು ಕುರಿತದ್ದಾಗಿರಬಹುದು.

### ವಿಷಯ ಹೊರಗಣ ವಸ್ತುವಲ್ಲ, ಒಳಗಣ ಭಾವನೆ

ಕಾವ್ಯದ ಸಾಮಗ್ರಿ ಕವಿಯಲ್ಲಿ ಉಂಟಾಗುವ ರಸಾನುಭವವೇ ಹೊರತು ಅದರ ಕಾರಣವಾದ ಹೊರಗಣ ವಸ್ತುವಲ್ಲವೆಂಬುದನ್ನು ಸ್ಪಷ್ಟವಾಗಿ ತಿಳಿಯುವುದು ಬಹಳ ಅವಶ್ಯಕ. ಸಾಹಿತ್ಯಕ್ಕೂ ಶಾಸ್ತ್ರಕ್ಕೂ ಇರುವ ವ್ಯತ್ಯಾಸವೆಲ್ಲಕ್ಕೂ ಇದೇ ಮೂಲ. ಶಾಸ್ತ್ರವು ಮಾನವ ಸ್ವಭಾವದಲ್ಲಿಯ ನಿರ್ಧಾರ್ಯವೂ ಪ್ರಮೇಯವೂ ಆದ ಚಿತ್ತವೃತ್ತಿಗಳನ್ನು ಒಪ್ಪುವ ವಿಷಯಗಳನ್ನು ವರ್ಣಿಸುತ್ತದೆ. ಇಂಥ ಎಲ್ಲ ವಿಷಯವೂ ನಿರ್ಧಾರ್ಯ, ಪ್ರಮೇಯ. ಸಾಹಿತ್ಯವು ಮಾನವನ ಅನಿರ್ಧಾರ್ಯವೂ ಅಪ್ರಮೇಯವೂ ಆದ ಪ್ರವೃತ್ತಿಗಳನ್ನು ಒಪ್ಪುವ ವಿಷಯವನ್ನು ಕುರಿತದ್ದು.

ವಿಷಯವೂ ಅನಿರ್ಧಾರ್ಯ; ಅಪ್ರಮೇಯ. ವಿಜ್ಞಾನ ಶಾಸ್ತ್ರಜ್ಞನು ಒಂದು ನಕ್ಷತ್ರವನ್ನು ವರ್ಣಿಸಬಹುದು, ಒಂದು ಕಪ್ಪೆಯ ಮೈಯ ಕಟ್ಟಡವನ್ನು ವರ್ಣಿಸಬಹುದು. ಅವನು ಹೇಳಬೇಕಾದದ್ದು ನಿರ್ಧರವಾದ ವಿಷಯ. ನಕ್ಷತ್ರ ಇಷ್ಟು ಸಹಸ್ರ ಯೋಜನ ದೂರದಲ್ಲಿದೆ, ಅದರ ಗಾತ್ರ ಇಷ್ಟು, ಅದರ ತೇಜಸ್ಸು ಈ ವರ್ಣಗಳಿಂದ ಕೂಡಿರತಕ್ಕದ್ದು, ಇತ್ಯಾದಿ. ಅಥವಾ ಈ ಕಪ್ಪೆ ಕನಿಷ್ಟಪಕ್ಷ ಇಷ್ಟು ಉದ್ದ, ಅಧಿಕಪಕ್ಷ ಇಷ್ಟು ಉದ್ದ ಇರುವುದು, ಇದರ ಕಾಲುಗಳ ರಚನೆ ಹೀಗೆ, ತಲೆಯ ರಚನೆ ಹೀಗೆ, ಇತ್ಯಾದಿ. ಒಂದು ವಿಷಯವನ್ನು ಹೇಳುವ ಅನೇಕ ವಿಜ್ಞಾನ ಶಾಸ್ತ್ರಜ್ಞರೂ ಅದೇ ಮಾತುಗಳನ್ನೇ ಹೇಳಬೇಕು. ಅದರಲ್ಲಿ ಅವರವರ ರಸಜ್ಞತೆಗೆ ಏನು ಅವಕಾಶವಿಲ್ಲ. ಅಳತೆ ಮಾಡುವವನು ಯಾವನಾದರೂ ಉದ್ದ ಒಂದೇ ; ಒಂದೇ ಅಲ್ಲದಿದ್ದರೆ ಅಳತೆ ತಪ್ಪು. ಸಾಹಿತ್ಯದಲ್ಲಿ ಹೀಗಲ್ಲ. ಕಾವ್ಯದಲ್ಲಿ ಕವಿ ವರ್ಣಿಸುವುದು ಆ ನಕ್ಷತ್ರವನ್ನೂ ಅಲ್ಲ, ಆ ಕಪ್ಪೆಯನ್ನೂ ಅಲ್ಲ. ಅವುಗಳಿಂದ ತನ್ನ ಮನಸ್ಸಿನಲ್ಲಿ ಉಂಟಾಗುವ ಭಾವಗಳನ್ನು ಈ ಭಾವಗಳ ಸ್ವಭಾವದಲ್ಲಿ ಸಾಮಾನ್ಯನಿಗೂ ಕವಿಗೂ ವ್ಯತ್ಯಾಸ ಉಂಟೆಂಬುದನ್ನು ಹೇಳಿಯೇ ಇದೆ. ಪೀಟರ್‌ಬೆಲ್ ಎಂಬುವನಿಗೆ ಪ್ರಿಮ್‌ರೋಸ್ ಪುಷ್ಪ ಬರಿಯ ಒಂದು ಪ್ರಿಮ್‌ರೋಸ್ ಪುಷ್ಪಮಾತ್ರವಾಗಿತ್ತೆಂದು ವರ್ಡ್ಸ್‌ವರ್ತ್ ಕವಿ ಒಂದು ಕಡೆ ಹೇಳಿದ್ದಾನೆ. ಇನ್ನೊಂದು ಕಡೆ ತನ್ನ ಮಾತನ್ನು ಹೇಳುತ್ತ

To me the meanest flower that blows can give
Thoughts that do often lie too deep for tears

ಎಂದು ಹೇಳಿದ್ದಾನೆ. ಪುಷ್ಪಗಳಲ್ಲಿ ಕನಿಷ್ಠವಾದುದೂ ಕೂಡ ಕವಿಯ ಹೃದಯದಲ್ಲಿ ಹೇಳಲಾಗದ ಭಾವಗಳನ್ನುಂಟುಮಾಡುವುದು. ಇದಕ್ಕೆ ಅವನ ರಾಗದ ಸಂಸ್ಕಾರ ಕಾರಣ. ಹೀಗೆಯೇ ಒಬ್ಬ ಕವಿಗೂ ಇನ್ನೊಬ್ಬ ಕವಿಗೂ ಈ ವಿಷಯದಲ್ಲಿ ವ್ಯತ್ಯಾಸವಿರಬಹುದು. ಇವನ ಮನೋಧರ್ಮ ಬೇರೆ, ಅವನ ಮನೋಧರ್ಮ ಬೇರೆ ; ಇವನ ಸಂಸ್ಕಾರ ಬೇರೆ ; ಅವನ ಸಂಸ್ಕಾರ ಬೇರೆ; ಇದರಿಂದ ಅವರವರಿಗೆ ತೋರುವ ಭಾವಗಳು ಬೇರೆ. ಇದರಿಂದಲೇ ಸಾಹಿತ್ಯವು ಮನುಷ್ಯ ಸ್ವಭಾವದ

ಅನಿರ್ಧಾರ್ಯವೂ ಅಪ್ರಮೇಯವೂ ಆದ ಅಂಶಗಳನ್ನು ಒಪ್ಪುವ ವಿಷಯಗಳನ್ನು ಕುರಿತದ್ದು ಎಂದು ಹೇಳಿದ್ದು. ನಿರ್ಧಾರ್ಯವಾದುದಕ್ಕಿಂತ ಅನಿರ್ಧಾರ್ಯವಾದದ್ದು ಶ್ರೇಷ್ಠವೆಂದು ಇಲ್ಲಿ ಅರ್ಥವಲ್ಲ. ಹಾಗೆ ನೋಡಹೋದರೆ ಈ ಅನಿರ್ಧಾರ್ಯವಾದದ್ದೆನ್ನುವ ಪ್ರವೃತ್ತಿಯ ಕೆಲವು ಭಾಗ ಮನುಷ್ಯರಿಗೂ ತಿರ್ಯಗ್ಜಂತುಗಳಿಗೂ ಸಾಮಾನ್ಯವಾದದ್ದು, ನಿರ್ಧಾರ್ಯವೆನ್ನುವುದು ಮನುಷ್ಯನಿಗೆ ಮಾತ್ರ ಅನುಗ್ರಹಿಸಲ್ಪಟ್ಟಿರುವುದು. ಶಾಸ್ತ್ರ ಸಾಹಿತ್ಯಗಳ ವಿಷಯವಾಗುವ ಸಾಮಗ್ರಿ ಬೇರೆ ಎಂಬುದು ಇಲ್ಲಿ ಪ್ರಕೃತವಾದ ಅಂಶ. ಈ ಕಾರಣದಿಂದ ಯಾರು ಬರೆದರೂ ಶಾಸ್ತ್ರದಲ್ಲಿ ಒಂದೇ ವಿಷಯವನ್ನು ಬರೆಯಬೇಕಾಗುವಂತೆ, ಯಾರು ಬರೆದರೂ ಕಾವ್ಯದಲ್ಲಿ ಬೇರೆ ವಿಷಯವನ್ನು ಬರೆಯಬೇಕಾಗುವುದು ಯಾಕೆಂದರೆ ಹೆಸರಿಗೆ ಕಾವ್ಯದ ವಿಷಯವಾದ ವಸ್ತು ಹೊರಗಣದಾದರೂ ನಿಜವಾಗಿಯೂ ಅದು ಕವಿಯೇ. ಶಾಸ್ತ್ರಜ್ಞನು ನಕ್ಷತ್ರವನ್ನು ಅಥವಾ ಕಪ್ಪೆಯನ್ನು ವರ್ಣಿಸುತ್ತಾನೆ. ಕವಿ ಆ ಹೆಸರನ್ನು ಇಟ್ಟು ತನ್ನನ್ನು ವರ್ಣಿಸಿಕೊಳ್ಳುತ್ತಾನೆ. ಇಬ್ಬರು ಕವಿಗಳ ಸಂಸ್ಕಾರ ಒಂದೇ ಆಗಿರುವುದು ಅಸಂಭವವಾಗಿರುವುದರಿಂದ ಇಬ್ಬರು ಒಂದೇ ಹೆಸರನ್ನಿಟ್ಟು ಎರಡು ಪದ್ಯಗಳನ್ನು ಬರೆದರೆ ಹೆಸರು ಒಂದಾಗುವುದೇ ಹೊರತು ಅದರ ಭಾವ ಒಂದಾಗುವುದಿಲ್ಲ. ವರ್ಣನಾ ಕಾವ್ಯಗಳಿಗಿಂತ ವ್ಯಂಜಕ ಕಾವ್ಯಗಳಲ್ಲಿ ಈ ವ್ಯತ್ಯಾಸ ಚೆನ್ನಾಗಿ ಕಾಣುವುದು. ಆದರೆ ಕವಿಯಲ್ಲಿ ಶೀಲವೈಶೇಷ್ಯವಿದ್ದರೆ ವರ್ಣನಾಕಾವ್ಯಗಳಲ್ಲಿಯೂ ಈ ವ್ಯತ್ಯಾಸ ಕಾಣುವುದು. ವ್ಯತ್ಯಾಸವಿಲ್ಲದೆ ಹೋಗಬಹುದೆಂದರೆ ಪ್ರಾಯಶಃ ಹೇಳಿದ ಕತೆಯನ್ನು ಹೇಳುವುದರಲ್ಲಿ ಇರಬೇಕು. ಆದರೆ ನಮ್ಮವರ ರಾಮಾಯಣ ಕತೆಗಳನ್ನು ಓದಿ ನೋಡಿದೆವಾದರೆ ಇಂಥ ಗ್ರಂಥಗಳಲ್ಲೂ ಕವಿಯ ಭಕ್ತಿಗೆ ತಕ್ಕಂತೆ ವಿವಿಧ ಚಾತುರ್ಯವು ರೂಪಗೊಳ್ಳುವುದೆಂಬುದು ಕಂಡುಬರುವುದು. ವ್ಯಂಜಕ ಕಾವ್ಯದಲ್ಲಂತೂ ಹೇಳಬೇಕಾದದ್ದೇ ಇಲ್ಲ. ಲೇಹಂಟ್ ಎಂಬಾತನು ಕೀಟ್ಸ್ ಕವಿಯೂ The Grasshopper and the Cricket ಎಂಬ ಒಂದೇ ವಿಷಯವನ್ನು ಕುರಿತು ಎರಡು ಪದ್ಯಗಳನ್ನು ಬರೆದಿದ್ದಾರೆ. ಇಬ್ಬರೂ ಒಂದು

ಸಾಯಂಕಾಲ ಪಂಥ ಹಾಕಿಕೊಂಡು ಅವನ್ನು ಒಂದೇ ಕಡೆ ಬರೆದರಂತೆ. ಓದಿದರೆ ಒಬ್ಬನ ಪದ್ಯಕ್ಕೂ ಇನ್ನೊಬ್ಬನ ಪದ್ಯಕ್ಕೂ ಸಂಬಂಧವೇ ಇಲ್ಲ. ಸ್ಕೈಲಾರ್ಕ್ ಪಕ್ಷಿಯನ್ನು ಕುರಿತು ವರ್ಡ್ಸ್‌ವರ್ತ್ ಕವಿ ಒಂದು ಪದ್ಯವನ್ನು ಬರೆದನು, ಷೆಲ್ಲಿ ಕವಿಯೂ ಒಂದನ್ನು ಬರೆದನು. ವರ್ಡ್ಸ್‌ವರ್ತಿನ ಸಾರವೇ ಬೇರೆ, ಷೆಲ್ಲಿಯ ಮಾಯವೇ ಬೇರೆ. ಹೀಗೆ ಕಾವ್ಯದ ವಿಷಯ ಅದರೂ ಕವಿಯ ಸಂಸ್ಕಾರ ಬೇರೆಯಾದ ಹಾಗೆಲ್ಲ ಅವನಲ್ಲಿ ಆ ವಿಷಯದಿಂದ ಉಂಟಾಗುವ ಭಾವಗಳು ಬೇರೆಯಾಗಿ ಕಾವ್ಯವು ಬೇರೆ ಬೇರೆ ಆಗಿ ನಿರ್ಮಾಣವಾಗುವುದು.

**ಕಾವ್ಯಸಾಮಗ್ರಿಲ್ಲಿ ಅನಂತ , ಅದರಲ್ಲಿ ಹಳೆಯದೇ ಇಲ್ಲ**

ಇದರಿಂದ ತಿಳಿಯಬೇಕಾದವು ಎರಡು ಅಂಶ ಉಂಟು. ಒಂದು ಏನೆಂದರೆ ಹಿಂದೆ ಯಾರೋ ಒಂದು ಕಾವ್ಯದಲ್ಲಿ ಒಂದು ವಿಷಯವನ್ನು ಬರೆದರು ಎಂದ ಮಾತ್ರಕ್ಕೆ ಇನ್ನೊಬ್ಬರು ಅದನ್ನು ಕುರಿತು ಕಾವ್ಯ ಬರೆಯಲಾಗುವುದಿಲ್ಲವೆಂದಾಗಲಿ ಬರೆಯಬಾರದು ಎಂದಾಗಲಿ ತಿಳಿಯಬಾರದು. ಈಗ ಬರೆಯುವವನು ಕಾವ್ಯ ಸಂಸ್ಕಾರವುಳ್ಳವನಾಗಿದ್ದಲ್ಲಿ ವಿಷಯ ಒಂದೇ ಆದರೂ ಅವನ ನುಡಿಗೆ ಗೌರವವನ್ನು ಕೊಡಬೇಕು. ನಾವು ಅಂಥ ಸಂಸ್ಕಾರವುಳ್ಳವರಾದರೆ ನಮ್ಮ ಸಂಸ್ಕಾರದ ಪರಿಪೂರ್ಣತೆಗಾಗಿ ಕಾವ್ಯರಚನೆಯಲ್ಲಿ ತೊಡಗುವುದು ತಪ್ಪಲ್ಲ. ನಿಜವಾಗಿ ನೋಡಿದರೆ ತೊಡಗುವುದು ಕರ್ತವ್ಯ ಕರ್ಮ. ಇನ್ನೊಂದು ವಿಷಯವೇನೆಂದರೆ ಕಾವ್ಯ ಸಾಮಗ್ರಿ ಅನಂತವಾದುದೆಂಬುದು. ಭೌತಿಕಶಾಸ್ತ್ರಗಳ ಅಭಿವೃದ್ಧಿಯಿಂದ ಮನುಷ್ಯನಿಗೆ ಈಗ ಆಶ್ಚರ್ಯವುಂಟು ಮಾಡುತ್ತಿರುವ ಅನೇಕ ವಸ್ತುಗಳು ಅವುಗಳ ಸ್ವಭಾವ ವ್ಯಕ್ತವಾದ ಹಾಗೆ ಆ ಆಶ್ಚರ್ಯಕಾರಕ ಶಕ್ತಿಯನ್ನು ಕಳೆದುಕೊಳ್ಳುತ್ತಿವೆ ಎಂದೂ ಹೀಗೆ ಭೌತಿಕ ಶಾಸ್ತ್ರಗಳು ಕಾವ್ಯ ನಿರ್ಮಾಣಕ್ಕೆ ಅವಶ್ಯಕವಾದ ರಸಗಳನ್ನು ನಾಶಪಡಿಸುವುವೆಂದೂ ಅಭಿಪ್ರಾಯವನ್ನು ಕೆಲವು ಕಡೆ ನೋಡಬಹುದು. ಈ ಮೊದಲು ಉಕ್ತನಾಗಿರುವ ಕೀಟ್ಸ್ ಕವಿ ಹೀಗೆ ಶಂಕೆಪಡುತ್ತಿದ್ದಂತೆ ಕಾಣುತ್ತದೆ. ಅವನು ಈ ವಿಷಯದಲ್ಲಿ ಒಂದು ಕಾವ್ಯವನ್ನು ಬರೆದನು.ಪ್ರಾಯಶಃ ಅವನ ಶಂಕೆ ಸಾಮಾನ್ಯರನ್ನು ಕುರಿತದ್ದಾಗಿರಬಹುದೇ ಹೊರತು ವಿಚಾರ ಪರರನ್ನು

ಕುರಿತದ್ದಾಗಿರಲಾರದು. ಸಾಮಾನ್ಯ ಜೀವಿಗಳಲ್ಲಿ ಅತಿ ಪರಿಚಯದಿಂದ ಅಗೌರವ ಮೊಳೆಯುವುದಾದರೂ ಉತ್ತಮ ಜೀವಿಗಳಲ್ಲಿ ಪರಿಚಯವು ಪೂರ್ಣಜ್ಞಾನವನ್ನು ಅದರಿಂದ ಅನುಭವಾಧಿಕ್ಯವನ್ನೂ ಮಾತ್ರ ಉಂಟುಮಾಡುವುದು. ಸೂರ್ಯನು ಏತರಿಂದ ಇಷ್ಟು ಪ್ರಭೆಯುಳ್ಳವನಾಗಿದ್ದಾನೆ ಎಂಬುದನ್ನು ನಾವು ಕಾಣೆವೆನ್ನಿ. ಅಥವಾ ಹೈಡ್ರೊಜೆನ್ ಎಂಬ ವಾತದ ಒಂದು ಅದ್ಭುತ ಕವಚ ಅವನನ್ನು ಸುತ್ತಿ ಸುಡುತ್ತಿರುವುದೆಂದೂ ಅದರಿಂದ ಅವನು ಆ ಪ್ರಭೆಯಿಂದ ಕೂಡಿದ್ದಾನೆ ಎಂದೂ ತಿಳಿದೆವೆನ್ನಿ. ಇದನ್ನು ಕಂಡರೂ ಕಾಣದಿದ್ದರೂ ಸೂರ್ಯನ ಪ್ರಭೆ ಸುಳ್ಳಲ್ಲ ; ಅದು ಅದ್ಭುತ ಪ್ರಭೆಯಲ್ಲದೆ ಹೋಗಲಿಲ್ಲ. ಹೈಡ್ರೊಜೆನ್ ಸುಟ್ಟು ಈ ಪ್ರಭೆಯುಂಟಾಯಿತೆಂದ ಮಾತ್ರಕ್ಕೆ ಪ್ರಭೆಯ ಆಶ್ಚರ್ಯೋತ್ಪಾದನ ಶಕ್ತಿ ಹೋಯಿತೇ ? ಹೋಗುವುದಕ್ಕೆ ಬದಲಾಗಿ ಒಂದು ಆಶ್ಚರ್ಯವಿದ್ದ ಕಡೆ ಎರಡು ಆಶ್ಚರ್ಯವಾಯಿತು. ಹೈಡ್ರೊಜೆನ್ ಸುಟ್ಟರೆ ಪ್ರಭೆ ಉಂಟಾಗುವುದೇತಕ್ಕೆ? ಭಗವಂತನ ಮಾಯೆ ಸೂರ್ಯನ ಪ್ರಭೆಯಲ್ಲಲ್ಲದೆ ಪ್ರಭೆಯ ನಿರ್ಮಾಣದಲ್ಲೇ ಪ್ರತ್ಯಕ್ಷವಾದ ಹಾಗಾಯಿತು. ಪ್ರಭೆಯ ಸ್ವಭಾವವನ್ನು ತಿಳಿದೆವೆನ್ನೋಣ. ಆ ಮೇಲೆ ಅದು ನಮಗೆ ಕಂಡಾಗ ನಮಗೆ ಅನುಭವ ಉಂಟಾಗುವುದು ಹೇಗೆ ಎಂಬ ಮಾಯೆ ನಿಲ್ಲುತ್ತದೆ ನಾವು ಸರ್ವಪ್ರಯತ್ನದಿಂದಲೂ ಸೃಷ್ಟಿಯ ಮಾಯಾ ವಸ್ತ್ರವನ್ನು ಸೆಳೆದು ಹಾಕುತ್ತಿದ್ದೇವೆ ಎಂದು ತಿಳಿದುಕೊಂಡಿರಬಹುದು. ಸೆಳೆದು ಹಾಕಿದ ವಸ್ತ್ರ ಕಣ್ಣಿಗೆ ತೋರವಾಗಿ ಕಾಣಬಹುದು. ಆದರೆ ಎಳೆದಿರುವುದಕ್ಕಿಂತ ಎಳೆಯಬೇಕಾಗಿರುವ ವಸ್ತ್ರ ಯಾವಾಗಲೂ ಹೆಚ್ಚಾಗಿಯೇ ಇರುವುದು. ಭಗವಂತನು ತನ್ನ ಮಾಯೆಗೆ ಅಕ್ಷಯಾಭಯವನ್ನು ನೀಡಿದ್ದಾನೆ. ಭೌತಿಕಶಾಸ್ತ್ರ ವೃದ್ಧಿಯಾಗಬಹುದು. ಸೃಷ್ಟಿಯ ಅನೇಕ ವಿಚಾರಗಳನ್ನು ಬರಬರುತ್ತ ನಮಗೆ ಸ್ಪಷ್ಟವಾಗುತ್ತ ಬಂಬಹುದು. ಏನೇ ಆದರೂ ಮನುಷ್ಯನಲ್ಲಿ ರಸಗಳನ್ನುಂಟುಮಾಡುವ ಭಾವಾವಿರ್ಭಾವ ಇರುವವರೆಗೂ ಆ ಭಾವಾವಿರ್ಭಾವ ಕೊನೆಗಾಣುವವರೆಗೂ ಕಾವ್ಯಕ್ಕೆ ಸಾಮಗ್ರಿ ಇಲ್ಲದೆ ಹೋಗುವುದಿಲ್ಲ. ಎಂದರೆ ಮನುಷ್ಯನ ಸ್ವಭಾವದ ಕಟ್ಟಡವೇ ಬದಲಾಗುವವರೆಗೂ ಕಾವ್ಯಕ್ಕೆ ಅವಕಾಶ ಉಂಟು.

## ೨೩. ಕಾವ್ಯರೂಪಗಳು

### ವ್ಯಂಜಕ ಗ್ರಂಥಗಳು

ಸಾಮಗ್ರಿಯ ಸ್ವಭಾವಕ್ಕೆ ಎರಡು ರೀತಿಯ ಕಾವ್ಯಗಳಿರುವುದೆಂದೂ ಅವುಗಳಲ್ಲಿ ಒಂದನ್ನು ವ್ಯಂಜಕ ಇನ್ನೊಂದನ್ನು ವರ್ಣನ ಎಂದು ಕರೆಯಬಹುದೆಂದೂ ಮೇಲೆ ಹೇಳಿತು. ಇವುಗಳ ಲಕ್ಷಣವನ್ನು ತಿಳಿಯುವುದರಿಂದ ಕಾವ್ಯಪಠನದಲ್ಲಿ ರಸಾನುಭವ ಹೆಚ್ಚುವುದೆಂದೂ ಹೇಳಿತು. ಇದು ಹೇಗೆ ಎಂದು ಇಲ್ಲಿ ಸ್ವಲ್ಪ ವಿಚಾರಮಾಡಬಹುದು, ಗ್ರಂಥಗಳನ್ನು ಪಠಿಸುವವರಿಗೆ ಹೇಗೋ ಹಾಗೆ ಈ ವಿಷಯವನ್ನು ತಿಳಿದುಕೊಳ್ಳುವುದರಿಂದ ಗ್ರಂಥಗಳನ್ನು ರಚಿಸುವವರಿಗೂ ಬಹಳ ಉಪಯೋಗ ಉಂಟು.

ಸಾಹಿತ್ಯದಲ್ಲೆಲ್ಲ ಕಾವ್ಯ ಹೇಗೆ ಸಾರವತ್ತಾದ ಶಾಖೆಯೋ ಹಾಗೆ ಕಾವ್ಯಗಳಲ್ಲಿ ಗೀತೆ ಸಾರವತ್ತಾದದ್ದು. ಏಕೆಂದರೆ ಮನುಷ್ಯನಿಗೆ ತನ್ನ ಅನುಭವ ಮನಸ್ಸನ್ನು ಹುಗುವ ಹಾಗೆ ಇನ್ನು ಯಾರ ಅನುಭವವೂ ಹುಗುವುದಿಲ್ಲ. ಮನಸ್ಸಿನಲ್ಲಿ ಉದಯಿಸುವ ಭಾವವು ತೀವ್ರವಾದದ್ದರಿಂದ ಅದರ ಆಕಾರವಾದ ಮಾತೂ ತೀವ್ರವಾಗಿರುವುದು. ಅದರಲ್ಲಿ ಅರ್ಥಪುಷ್ಟಿ ಅಧಿಕವಾಗಿರುವುದು. ಅಲ್ಲದೆ ಅನುಭವವನ್ನು ಕುರಿತು ಹೇಳುವ ಸಂದರ್ಭದಲ್ಲಿ ಆ ಒಂದು ಅನುಭವವೇ ಮನಸ್ಸನ್ನು ಆಕ್ರಮಿಸಿಕೊಂಡು ಚೇತಸ್ಸಿನ ಪ್ರವೃತ್ತಿಯೆಲ್ಲ ಅದನ್ನು ಕುರಿತದ್ದಾಗಿರುವುದರಿಂದ ಕಾವ್ಯವು ಏಕಾಗ್ರತೆಯಿಂದ ಕೂಡಿರುತ್ತದೆ. ಉತ್ತಮವಾದ ಗೀತೆಯೆಲ್ಲ ಈ ರೀತಿಯ ಕಾವ್ಯ. ಇದು ಸಾಮಾನ್ಯವಾಗಿ ಸಣ್ಣದಾಗಿದ್ದು ಒಂದು ಭಾವವನ್ನು ಪ್ರಮುಖವಾಗಿ ವರ್ಣಿಸಿ ಶೀಘ್ರದಲ್ಲಿ ಮುಗಿಯುವುದು. ಇಂಗ್ಲೀಷಿನ ಲಿರಿಕ್ ಎಂಬ ಪದ್ಯಗಳೆಲ್ಲ ಇಂಥವು. ನಮ್ಮ ಪುರಂದರದಾಸ ಕನಕದಾಸರ ಕೀರ್ತನೆಗಳು ಇಂಥವು. ಈಗ ರವೀಂದ್ರನಾಥ ಠಾಕೂರ ಕವಿವರ್ಯರು ಬಂಗಾಳಿಯಲ್ಲಿ ಬರೆದಿದ್ದು ಇಂಗ್ಲೀಷಿಗೆ ಪರಿವರ್ತಿಸಿರುವ ಪದ್ಯಗಳು ಇಂಥವು. ಈ ರೀತಿಯ ಕಾವ್ಯ ಪದ್ಯವಾಗಿಯೇ ಇರಬೇಕು ಎನ್ನುವುದಿಲ್ಲ, ಎಲ್ಲ

ವೇಳೆಯಲ್ಲೂ ಕವಿಯ ಸ್ವಂತದ ಅನುಭವವನ್ನು ಕುರಿತಿರಬೇಕು ಎನ್ನುವುದು ಇಲ್ಲ. ಆ ಕಾವ್ಯದಲ್ಲಿ ಆ ರೀತಿ ಕಂಡರೆ ಸಾಕು. ಕವಿ ಯಾವುದಾದರೊಂದು ಅವಸ್ಥೆಯಲ್ಲಿ ಇನ್ನೊಬ್ಬನು ಹೇಳಿರಬಹುದೆಂಬ ಮಾತನ್ನು ಹೇಳಬಹುದು ; ಶುನಶ್ಶೇಫನು ವಿಶ್ವಾಮಿತ್ರನನ್ನು ಬೇಡಿಕೊಂಡನೆಂಬಂತೆ ಒಂದು ಪದ್ಯವನ್ನು ಬರೆಯಬಹುದು. ಆ ಒಂದು ಅವಸ್ಥೆಯನ್ನು ಮಾತ್ರ ಶುನಶ್ಶೇಫನಂತೆ ಹೇಳಿದರೆ ಅದು ಗೀತೆಯಾಗುವುದು. ಇಂಥ ಕಾವ್ಯವನ್ನು ಇಂಗ್ಲೀಷಿನಲ್ಲಿ ಡ್ರಮ್ಯಾಟಿಕ್ ಲಿರಿಕ್ ಎನ್ನುವರು. ಎಂದರೆ ಇತರ ಗೀತೆ ಎಂದು ಅರ್ಥ. ಹೀಗೆ ಬರೆಯುವಲ್ಲಿ ಕವಿ ಗದ್ಯವನ್ನು ಉಪಯೋಗಿಸಿದರೂ ಉಪಯೋಗಿಸಬಹುದು. ಹೇಗೆ ಬರೆದರೂ ಒಂದು ಅವಸ್ಥೆಯನ್ನು ಸಾಧ್ಯವಾದಷ್ಟು ಸೂಕ್ಷ್ಮವಾಗಿ ರಸವತ್ತಾಗಿ ವರ್ಣಿಸುವ ಕಾವ್ಯವೆಲ್ಲ ಈ ಜಾತಿಗೆ ಸೇರಿದ್ದು. ಹಲವು ಸಣ್ಣ ಕತೆಗಳು ಈ ರೀತಿಯ ಕವನ. ಠಾಕೂರರ ಚಿತ್ರಾಂಗದಾ ಎಂಬ ನಾಟಕ ಈ ರೀತಿಯ ಕವನ, ನಾಲ್ಕೈದು ಜನ ಮಾತನಾಡುವುದಿದ್ದರೂ ಆ ಕಾವ್ಯ ಒಂದು ಸಂಗತಿಯನ್ನು ಶೀಘ್ರದಲ್ಲಿ ಒಂದು ಭಾವ ಪ್ರಮುಖವಾಗಿರುವಂತೆ ವಿವರಿಸುತ್ತದೆ.

## ವರ್ಣನಾ ಗ್ರಂಥಗಳು

ವ್ಯಂಜಕವಲ್ಲದ ಗ್ರಂಥವೆಲ್ಲ ವರ್ಣನಾ ಗ್ರಂಥವೆನ್ನಬಹುದು. ಕವಿಯ ಒಂದು ಕ್ಷಣಿಕವಾದ ಭಾವವನ್ನು ತೀವ್ರವಾಗಿ ವರ್ಣಿಸದೆ ಇರುವ ಗ್ರಂಥವೆಲ್ಲ ಇಂಥದು. ಎಂದರೆ ಇವುಗಳ ಸಂಖ್ಯೆ ಪ್ರಾಯಶಃ ಹತ್ತರಲ್ಲಿ ಒಂಬತ್ತಕ್ಕೆ ಹೆಚ್ಚಾಗುತ್ತದೆ. ಅಲ್ಲದೆ ಈ ಜಾತಿಯಲ್ಲಿ ನಾಟಕ, ಕತೆ, ಕಾವ್ಯ, ಮಹಾಕಾವ್ಯ, ಉಪನ್ಯಾಸ ಇವೆಲ್ಲವೂ ಸೇರುವುವು. ಇಷ್ಟು ವಿಸ್ತಾರವಾದ ಇಷ್ಟು ಬೇರೆ ಬೇರೆ ವಿಧದ ಗ್ರಂಥವೆಲ್ಲ ಒಂದು ಜಾತಿಯೆಂದೂ ಹೇಗೆ ಹೇಳಬಹುದು ಎಂದು ಪ್ರಶ್ನೆ ತೋರುವುದು. ಇದರ ಸಾಧಕ ಲಕ್ಷಣವೇನೆಂದರೆ, ಕವಿಗೆ ಇರತಕ್ಕ ಸಾಮಗ್ರಿ ಎರಡು ತೆರನಾದ ಅದರಲ್ಲಿ ಒಂದು ವ್ಯಂಜಕ ಗ್ರಂಥದ ವಸ್ತು ಇನ್ನೊಂದರಲ್ಲಿ ಉಂಟಾಗತಕ್ಕವು ಈ ಗ್ರಂಥಗಳೆಲ್ಲ. ಇವುಗಳಲ್ಲಿ ಕವಿಯ ಅನುಭವದ

ತೀವ್ರತೆಗಿಂತ ಪರಾಮರ್ಶ ಹೆಚ್ಚಾಗಿರುವುದು. ಅನೇಕ ವೇಳೆ ಕವಿ ಒಂದು ಅವಸ್ಥೆಯಲ್ಲಿ ಬರೆದ ಕಾವ್ಯ ಲಿರಿಕ್ ಆಗುವುದು. ಆ ಅವಸ್ಥೆಯನ್ನು ಬಿಟ್ಟು ಮುಂದುವರಿದು ಬೇರೆ ಒಂದು ಅವಸ್ಥೆಯಿಂದ ತನ್ನ ಹಿಂದಣ ಅವಸ್ಥೆಯ ಭಾವಗಳನ್ನು ಹೇಳಿದರೆ ಅದು ವರ್ಣನಾ ಕಾವ್ಯವಾಗುವುದು. ಎಂದರೆ ವರ್ಣನಾ ಕಾವ್ಯದ ವಸ್ತು ಬೇರೊಬ್ಬ ವ್ಯಕ್ತಿಯ ಅನುಭವ ಅಥವಾ ಭಾವವಾಗಿರ ಬೇಕೆನ್ನುವುದಿಲ್ಲ. ಬರೆಯುವ ಅವಸ್ಥೆಯಲ್ಲಿ ಕಾವ್ಯದ ವಿಷಯ ಕವಿಗೆ ಬೇರೆಯಾಗಿದ್ದರೆ ಸರಿ. ಒಂದು ದಿನದ ಮನುಷ್ಯನು ಹಿಂದಿನ ದಿನದವನಲ್ಲ ; ಅವನು ಕ್ಷಣಕ್ಷಣಕ್ಕೂ ಬೆಳೆಯುತ್ತಿರುವನು ಅವಸ್ಥೆಯಿಂದ ಅವಸ್ಥೆಗೆ ಬೇರೆಯಾಗುವನು. ಕವಿಯಲ್ಲಿ ಈ ಬೆಳೆವಣಿಗೆ ಬಹಳ ಶೀಘ್ರವಾಗಿಯೂ ಸ್ಪಷ್ಟವಾಗಿಯೂ ಆಗುವುದು. ಹತ್ತು ದಿನದ ಒಂದು ಸ್ಥಿತಿ ನಮಗೆ ಪೂರ್ವಜನ್ಮದ ಕತೆಯೋ ಎಂದು ಒಂದೊಂದು ಸಲ ತೋರುವಂತೆ ಕವಿಗೆ ಅವನ ಅವಸ್ಥೆಗಳೆಲ್ಲ ಮೆಟ್ಟಲುಗಳಂತೆ ಸ್ಪಷ್ಟವಾಗಿಯೂ ಬೇರೆಯಾಗಿಯೂ ಕಾಣುವುವು. ಅವನು ತಾನು ಇರುವ ಮೆಟ್ಟಲಿನಿಂದ ಉಳಿದ ಮೆಟ್ಟಲುಗಳನ್ನು ಬೇರೆಯಾಗಿ ನೋಡಿ ವರ್ಣಿಸಬಲ್ಲನು. ಹೀಗೆ ಹಿಂದಣ ಅವಸ್ಥೆಗಳನ್ನು ಪೃಥಕ್ಕಾಗಿ ಎಣಿಸಿ ತಿಳಿಯುವುದು ಪರಾಮರ್ಶದ ಹೃದಯ. ಈ ಶಕ್ತಿಯಿಂದಲೇ ಕವಿ ಊಹೆಯ ಮೂಲಕ ತಿಳಿಯುವ ಇತರರ ಅನುಭವವನ್ನೂ ಕಾವ್ಯದ ವಸ್ತುವಾಗಿ ನಾದುವನು. ಈ ರೀತಿಯಲ್ಲಿ ಕವಿಯ ಹಿಂದಣ ಅವಸ್ಥೆಯೋ ಅಥವಾ ಇತರ ಅನುಭವವೋ ಪರಾಮರ್ಶಪ್ರಧಾನವಾಗಿರುವಂತೆ ಕಾವ್ಯದಲ್ಲಿ ರೂಪನ್ನು ಹೊಂದಿದರೆ ವರ್ಣನಾಕಾವ್ಯವಾಗುವುದು.

ವ್ಯಂಜಕ ಗ್ರಂಥದಲ್ಲಿ ಕವಿಯ ಸಂಸ್ಕಾರಕ್ಕೆ ತಕ್ಕಂತೆ ಒಂದೇ ವಸ್ತು ಹೇಗೆ ಅನೇಕ ರೀತಿಯಲ್ಲಿ ರೂಪವನ್ನು ಹೊಂದಬಹುದೋ ಹಾಗೆ ವರ್ಣನಾ ಗ್ರಂಥದಲ್ಲಿಯೂ ಕವಿಯ ಸಂಸ್ಕಾರಕ್ಕೆ ತಕ್ಕಂತೆ ಒಂದೇ ವಿಷಯವು ಅನೇಕ ರೂಪವನ್ನು ಹೊಂದಬಹುದು. ಪ್ರಪಂಚವೂ ಕವಿಯ ಆತ್ಮವನ್ನು ಮುಟ್ಟಬಹುದಾದ ರೀತಿಗೆ ಮೊದಲು ಕೊನೆಯಿಲ್ಲ;ಅದರಿಂದ

ಉಂಟಾಗಬಹುದಾದ ಕಾವ್ಯಗಳ ಮೊತ್ತಕ್ಕೂ ಮೊದಲು ಕೊನೆಯಿಲ್ಲ. ಯಾವುದಾದರೂ ಒಂದು ವಿಷಯದಲ್ಲಿ ತನಗೆ ಬಂದ ಆಲೋಚನೆಯನ್ನು ಕವಿ ಸುಮ್ಮನೆ ಆಲೋಚನೆಯಾಗಿ ಬರೆದರೆ ಅದು ಉಪನ್ಯಾಸವಾಗುವುದು. ಅವನು ಊಹೆಯನ್ನು ಉಪಯೋಗಿಸಿ ಇದೇ ವಿಷಯವನ್ನು ಇಬ್ಬರು ಮಾತನಾಡುವ ರೀತಿಯಲ್ಲಿ ಬರೆಯಬಹುದು ; ಹೀಗೆ ಬರೆಯುವುದರಲ್ಲಿ ಒಂದು ಸ್ವಭಾವವನ್ನು ಮಾತ್ರವಲ್ಲದೆ ಒಂದು ಸ್ವಭಾವವನ್ನು ವರ್ಣಿಸಿ ಅದರಲ್ಲಿ ಇದೂ ಇದರ ಜೊತೆಯ ಅದರ ಇತರ ಭಾವಗಳೂ ಸೇರಿದರೆ ಸೇರಲಿ ಎಂದು ಬರೆದರೆ ಅದು ಒಂದು ಕತೆಯಾಗುವುದು. ಇಂಥ ಕತೆಯಲ್ಲಿ ರಸಪುಷ್ಟವಾದ ಸನ್ನಿವೇಶಗಳನ್ನು ಆರಿಸಿಕೊಂಡು ವ್ಯಕ್ತಿಗಳು ಆಚರಿಸುವಂತೆ ಆಚರಣೆಯನ್ನು ತೋರಿಸಿ, ವಿಷಯವನ್ನು ಪ್ರತಿಪಾದಿಸಿದರೆ ನಾಟಕವಾಗುವುದು. ಪಾತ್ರಗಳ ನಡೆನುಡಿಗಳನ್ನು ಮಾತ್ರವಲ್ಲದೆ ಅವುಗಳ ವಿಷಯದಲ್ಲಿ ಅಭಿಪ್ರಾಯಗಳನ್ನೂ ಸೂಚಿಸುತ್ತ ಸನ್ನಿವೇಶ ಸನ್ನಿವೇಶಕ್ಕೆ ನಡುವೆ ವಿವರಣವನ್ನು ಕೊಡಬೇಕೆಂದರೆ ಕಾದಂಬರಿಯಾಗುವುದು. ಮಾನವ ಚರಿತ್ರೆಯ ಗಂಭೀರಾವಸ್ಥೆಗಳನ್ನು ಅರಿತವರು ಬರೆದರೆ ನಾಟಕವೂ ನಾವಲೂ ಗೀತೆಗಳನ್ನೂ ಇತರ ಗೀತೆಗಳನ್ನೂ ಒಳಗೊಂಡ ಅದ್ಭುತ ಕಾವ್ಯಗಳಾಗುವುವು. ನಾಟಕದಲ್ಲೂ ನಾವಲಿನಲ್ಲೂ ತಿಳಿಯುವುದು ಜೀವನದ ಒಂದು ಭಾಗ ಇಲ್ಲವೇ ಅನೇಕ ಪಾತ್ರಗಳ ಜೀವನದ ಒಂದು ಭಾಗ ; ಅಥವಾ ಒಂದೆರಡು ಜೀವನಗಳ ವಿಷಯ ಮಾತ್ರ. ಅನೇಕ ಪಾತ್ರಗಳ ಜೀವನ ಚರಿತ್ರೆಯನ್ನು ಇದೇ ರೀತಿಯಲ್ಲಿ ವರ್ಣಿಸಿದರೆ ಅದು ಸಣ್ಣ ಒಂದು ಪ್ರಪಂಚದ ಚರಿತ್ರೆಯೇ ಆಗುವುದು. ರಾಮಾಯಣ ಅದಕ್ಕಿಂತ ಹೆಚ್ಚಾಗಿ ಮಹಾಭಾರತ ; ಅಥವಾ ಗ್ರೀಕರ ಇಲಿಯಡ್ ಒಡೀಸ್ಸಿ ; ಇವು ಇಂತಹ ಮಹಾಕಾವ್ಯಗಳು. ಎಂದರೆ ವರ್ಣನಾ ಕಾವ್ಯಗಳಲ್ಲಿ ವಿಷಯದ ಗೌರವಕ್ಕೆ ತಕ್ಕಹಾಗೂ ಕವಿಯ ಉದ್ದೇಶ ಸಂಸ್ಕಾರಗಳಿಗೆ ತಕ್ಕ ಹಾಗೂ ವಿಷಯವು ನಾನಾಗಾತ್ರದ ನಾನಾರೂಪದ ಕಾವ್ಯವಾಗಿ ಪರಿಣಮಿಸಬಹುದು. ಆದರೂ ಎಲ್ಲದರಲ್ಲೂ ಈ ಒಂದು ಲಕ್ಷಣ ಕಂಡುಬರುವುದು. ಅದರಲ್ಲಿ ಕವಿಯ ಆತ್ಮಾನುಭವ ಮುಖ್ಯವಲ್ಲ. ಅವನಿಗೆ

ಕಾಣುವ ಪ್ರಂಪಂಚದ ವರ್ಣನೆ ಅದರ ಮುಖ್ಯ ವಿಷಯ ; ಇಲ್ಲಿ ಪ್ರತಿಪಾದನ
ಮುಖ್ಯ. ಗುಣ ಪರಾಮರ್ಶೆ.

### ಕವಿಗೆ ಕಾವ್ಯರೂಪಜ್ಞಾನ ಚೆನ್ನಾಗಿ ಇರಬೇಕು

ಕವಿಗೆ ತನ್ನ ಕಾವ್ಯದಲ್ಲಿ ಸಾಮಗ್ರಿ ಹೇಗೆ ಮುಖ್ಯವೋ ಹಾ
ರೂಪಜ್ಞಾನವೂ ಮುಖ್ಯವಾದುದು. ಸಾಮಗ್ರಿಗೆ ತಕ್ಕಂತೆ ರೂಪವನ್ನು
ಕೊಡದಿದ್ದರೆ ಪ್ರಾಯಶಃ ಕಾವ್ಯ ಕೆಡುವುದು. ಉಪನ್ಯಾಸವಾಗಿ ಹೇಳಬೇಕಾ
ವಿಷಯವನ್ನು ಸುಮ್ಮನೆ ತುಂಡುಗಳನ್ನಾಗಿ ಮಾಡಿ ನಾಲ್ಕು ಜನರ ಬಾಯಲ್ಲಿ
ಹೇಳಿಸಿದರೆ ಅದು ಉಪನ್ಯಾಸವೂ ಆಗುವುದಿಲ್ಲ. ಕತೆಯೂ ಆಗುವುದಿಲ್ಲ
ಅಥವಾ ಸ್ವಲ್ಪ ಚಮತ್ಕಾರದಿಂದ ವ್ಯಕ್ತಿಗಳನ್ನು ಬೇರೆಬೇರೆ ಎಂಬಂತೆ ತೋರಿಸಿ
ಬರೆದರೂ, ಬಾಯಿ ಮಾತ್ರ ವ್ಯಕ್ತಿಯದು ಮಾತು ಕವಿಯದು ಆಗಿ
ಕತೆಯಲ್ಲಿರುವವರು ಉಡುಪುತೊಡವುಗಳಲ್ಲಿ ಬೇರೆಬೇರೆಯಾದರೂ
ನಡೆನುಡಿಯಲ್ಲಿ ಕವಿಯ ಪ್ರತಿಮೆಗಳಾಗುವರು. ಸಾಹಿತ್ಯದಲ್ಲಿ ಹೀಗೆ ಕಟ್ಟಿರುವ
ಗ್ರಂಥಗಳು ಅನೇಕ. ಸಣ್ಣ ಕತೆಯಾಗಿರಬೇಕಾದದ್ದನ್ನು ನಾವಲಾಗಿ ಬರೆದ
ಗ್ರಂಥ ನೀರೂ ಜೊಂಡೂ ತುಂಬಿದ ಸೋರೆಯಂತೆ ಆಗುತ್ತದೆ. ನಾವಲಾಗಿ
ಬೇಕಾದದ್ದನ್ನು ಸಣ್ಣ ಕತೆಯಾಗಿ ಬರೆದರೆ ಒಂದು ವಿಷಯವನ್ನು ಹೇಳು
ವ್ಯವಧಾನದಲ್ಲಿ ಹತ್ತು ವಿಷಯವನ್ನು ಹೇಳಬೇಕಾಗಿ ಕವನವು ನಡೆದ ಸಂಗತಿಯ
ಪಟ್ಟಿಯೊಂದಾಗುವುದು, ಅದರಲ್ಲಿ ರಸಹುಟ್ಟುವುದು ಸಾಧ್ಯವಲ್ಲ
ಜೀವನಚರಿತೆಯ ಮನೋವಾಕ್ಕಾಯ ಮೂರರ ವಿಷಯವನ್ನು ಚೆನ್ನಾಗಿ
ವರ್ಣಿಸಬೇಕೆನ್ನುವವರು ನಾಟಕವನ್ನು ಬರೆಯಬಾರದು, ನಾವಲನ್ನು
ಬರೆಯಬೇಕು. ನಡೆದ ಕೆಲವು ಮುಖ್ಯ ಸಂಗತಿಗಳಿಂದ ಪುಸ್ತಕ ವ್ಯಕ್ತಿಗಳ
ಸ್ವಭಾವಗಳನ್ನು ಇತರ ಮುಖ್ಯ ವಿಷಯಗಳನ್ನೂ ಊಹಿಸಿಕೊಳ್ಳುವುದಕ್ಕೆ
ಬಿಡಬೇಕೆನ್ನುವರು ನಾವಲನ್ನು ಬರೆಯಬಾರದು, ನಾಟಕವನ್ನು ಬರೆಯಬೇಕು.
ಸಾಮಾನ್ಯವಾದ ನಾವಲನ್ನು ಮಹಾಕಾವ್ಯದಂತೆ ನಡೆಯಿಸಲು ಯತ್ನಮಾಡುವುದು
ಚೆನ್ನಾಗಿರುವುದಿಲ್ಲ." ಅನಂತರದಲ್ಲಿ ವೈಶಂಪಾಯನ ಮುನೀಂದ್ರನ

ಮೇಜಯರಾಯನನನ್ನು ಕುರಿತು " ಎಂದು ಅಧ್ಯಾಯವನ್ನು ಆರಂಭಮಾಡಿದರೆ
ರಂಭದ ಭಾರವನ್ನು ತಡೆಯುವ ವಿಷಯ ಗೌರವ ಅದರ ಒಳಗೆ ಇರಬೇಕು.
ವೇ ಸಂದರ್ಭದಲ್ಲಿ ಒಂದೇ ವಿಷಯವನ್ನು ಹೇಳುವ ಮಾತು ನಾವಲಿನಲ್ಲಾದರೆ
ವಾಗಿರಬೇಕಾಗುವುದು, ಮಹಾಕಾವ್ಯದಲ್ಲಿ ಅದು ಒಂದು ಸ್ವರ್ಗವನ್ನು
ಬಬಹುದು. ಕಾವ್ಯವನ್ನು ಬರೆಯುವವರು ಇದನ್ನೆಲ್ಲ ಸಾಮಾನ್ಯವಾಗಿ
ಚಿಸಿಯೇ ಬರೆಯುವರು. ಸರಿಯಾದ ರೂಪದಲ್ಲಿ ಬರೆದರೆ ಸಾಮಗ್ರಿ
ಪಗಳ ಔಚಿತ್ಯ ಕೆಡದೆ ಕಾವ್ಯ ಆ ವಿಷಯದಲ್ಲಿ ಲಕ್ಷಣವಾಗಿರುವುದು.

### ಲೋಪವಿದ್ದಲ್ಲಿ ಓದುವವನು ಸರಿಪಡಿಸಿಕೊಳ್ಳಬೇಕು

ಆದರೆ ಕೆಲವು ವೇಳೆ, ಇಲ್ಲವೆ ಈ ವಿಷಯವನ್ನು ಕುರಿತು ಯೋಚನೆ
ಡದೆ ಇರುವುದರಿಂದಲೋ, ಇಲ್ಲವೆ ಯೋಚನೆಮಾಡಿದರೂ
ಶಾಂತರದಿಂದಲೋ, ಕವಿ ತನ್ನ ಸಾಮಗ್ರಿಗೆ ಸರಿಯಾದ ರೂಪವನ್ನು
ದೆ ಸ್ವಲ್ಪ ಬೇರೆಯಾದ ರೂಪವನ್ನು ಕೊಡಬಹುದು. ತಿಳಿವು
ದ್ದರಿಂದ ರೂಪವನ್ನು ಕೆಡಿಸುವ ಕವಿಯಾದರೆ ಸಾಮಗ್ರಿಯೂ ಅಷ್ಟು
ಮವಾಗಿರಲಾರದು, ಆಗ್ಗೆ ಓದುವವರು ಆ ಕಾವ್ಯವನ್ನು ಶ್ರದ್ಧೆಯಿಂದ
ಡದಿದ್ದರೆ ತೊಂದರೆ ಇಲ್ಲ. ಹೀಗಿಲ್ಲದೆ ಸಾಮಗ್ರಿ ಸರಿಯಾದದಾದರೂ
ಪಮಾತ್ರ ಸರಿಯಾಗಿಲ್ಲವಾದರೆ ಓದುವವರು ಅದನ್ನು ಹೇಗಾದರೂ
ಸುವುದಕ್ಕೆ ಯತ್ನಮಾಡಬೇಕು.ಇದನ್ನು ಮಾಡದವರು, ಮನೆ ಸುಡುತ್ತದೆ
ಮಾತನ್ನು ಕಾಂಭೋಜಿ ರಾಗದಲ್ಲಿ ಹೇಳದಿದ್ದರೆ ಕೇಳುವುದಿಲ್ಲ ಎಂಬ
ಸಂತೆ ಆಗುವರು. ಇಂಥ ಸಂದರ್ಭದಲ್ಲಿ ಕಾವ್ಯರೂಪದ ವಿವರ
ವರಾದರೆ ಪಾಠಕರು ಭಾವವನ್ನು ಸುಲಭವಾಗಿ ಗ್ರಹಿಸುವರು. ಕಾವ್ಯದ
ದವೇನೋ ನಾಟಕದಂತಿರಬಹುದು, ಮಾತೆಲ್ಲ ಒಂದು ವಿಷಯದ
ಯನ್ನುವ ಎರಡು ಪರದಿಂದ ವಿಶದಪಡಿಸುವುದಾಗಿರಬಹುದು. ಹೀಗಿದ್ದರೆ

ಇದನ್ನು ಗ್ರಹಿಸಿದವರು ಕಾವ್ಯದಿಂದ ಏನನ್ನು ತಿಳಿಯಬೇಕೆಂಬುದನ್ನು ಶೀಘ್ರವಾಗಿ ನಿಷ್ಕರ್ಷಿಸುವರು, ಗ್ರಹಿಸದವರು, ಪಾತ್ರಗಳ ಸ್ವಭಾವ ನಿರೂಪಣ ಸರಿಯಾಗಿಲ್ಲವಲ್ಲ, ಬರಿಯ ಚರ್ಚೆಯಾಗಿ ಹೋಗಿದೆ, ಎಂದು ಅತೃಪ್ತರಾಗುವರು. ಆಂಗ್ಲೇಯರ ನವೀನ ನಾಟಕ ಅನೇಕ ದರಲ್ಲಿ ಈ ವಿರೂಪ ಕಾಣುತ್ತದೆ ; ಮಾತನಾಡುವವರು ನಾಲ್ಕಾರು ಜನ ; ಕೆಲವರು ಬುದ್ಧಿವಂತರು, ಕೆಲವರು ದಡ್ಡರು, ಕೆಲವರು ನಯದ ಜನ ; ಕೆಲವರು ಒರಟರು, ಆದರೆ ಎಲ್ಲರೂ ಆಡುವುದೂ ಒಂದೇ ಗುರಿಯ ಮಾತು, ಎಲ್ಲರ ಉಕ್ತಿಯಲ್ಲಿಯೂ ಒಂದೇ ರೀತಿಯ ಚಮತ್ಕಾರ, ಒಂದೇ ರೀತಿಯ ಹಾಸ್ಯ. ಇದು ನಾಟಕದ ಲಕ್ಷಣಕ್ಕೆ ವಿರೋಧ. ಗ್ರಂಥಕರ್ತನು ಇಲ್ಲಿ ಮಾಡುತ್ತಿರುವುದೇನೆಂದರೆ ; ತಾನು ಚರ್ಚಿಸಬೇಕೆಂಬ ಒಂದು ವಿಷಯವನ್ನು ತೆಗೆದುಕೊಂಡಿದ್ದಾನೆ ; ಅದಕ್ಕೆ ನಾಲ್ಕು ರೀತಿಯ ಜನ ನಾಲ್ಕು ವಿಧವಾದ ಅಭಿಪ್ರಾಯವನ್ನು ಹೇಳಬಹುದು ; ಅದನ್ನೆಲ್ಲಾ ತನ್ನ ಮಾತಿನಲ್ಲಿ ಚಮತ್ಕಾರವಾಗಿ ಹಾಸ್ಯರಸಯುಕ್ತವಾಗಿ ಬರೆದು ಅವರ ಹೆಸರಿನಲ್ಲಿ ಹೇಳಿದ್ದಾನೆ. ನಾಟಕವನ್ನು ಬರೆಯುವುದಕ್ಕೆ ಪ್ರತಿಯಾಗಿ, ನಯವಾದವನು ಹೀಗೆನ್ನಬಹುದು. ಅದಕ್ಕೆ ಒರಟು ಮನುಷ್ಯನದು ಇದು ಉತ್ತರ, ದಡ್ಡನು ಹೀಗೆನ್ನಬಹುದು, ಅದಕ್ಕೆ ಬುದ್ಧಿವಂತನು ಹೇಳುವ ಮಾತು ಇದು, ಎಂದು ನಾನಾ ಮುಖದಿಂದ ಒಂದು ವಿಷಯವನ್ನು ಚರ್ಚಿಸಿ ಉಪನ್ಯಾಸ ಬರೆಯಬಹುದಾಗಿತ್ತು. ಉಪನ್ಯಾಸವನ್ನು ಬರೆಯಲಿಲ್ಲ, ನಾಟಕವನ್ನು ಬರೆದಿದ್ದಾನೆ. ಇದನ್ನು ಮನಸ್ಸಿನಲ್ಲಿಟ್ಟುಕೊಂಡು ಓದಿದರೆ ನಮಗೆ ನಾಟಕ ಕೆಟ್ಟು ಹೋಯಿತಲ್ಲ ಎಂಬ ಅಸಮಾಧಾನಕ್ಕೆ ಪ್ರತಿಯಾಗಿ ಈ ವಿಷಯವನ್ನು ಎಷ್ಟು ಚಮತ್ಕಾರವಾಗಿ ಚರ್ಚೆ ಮಾಡಿದಾನೆಂಬ ಉತ್ಸಾಹ ಉಂಟಾಗುವುದು. ಕವಿಯ ಆಶಯ ತಿಳಿದ ಹಾಗಾಗುವುದು.

ರೂಪು ಸರಿಯಾಗುವುದಕ್ಕೆ ಸಾಮಗ್ರಿ ಸರಿಯಾದ ಪಾಕಕ್ಕೆ ಬಂದಿರಬೇಕು

ಹೀಗೆ ತನ್ನ ಕಾವ್ಯ ಕೆಡುವುದಲ್ಲದೆ ಓದುವವರಿಗೆ ಕಷ್ಟವೂ ಆಗುವುದಾದ ಕವಿ ತನ್ನ ಸಾಮಗ್ರಿಗೆ ಸರಿಯಾದ ರೂಪವನ್ನು ಕೊಡದೆ ಬೇರೆ ರೂಪವನ್ನು

ೂಡುವುದು ಏಕೆ ಎಂದು ಯಾರಾದರೂ ಕೇಳಬಹುದು. ಇದು ಒಟ್ಟಿನಲ್ಲಿ
ರ್ಚಿಸುವುದಕ್ಕೆ ಸಾಧ್ಯವಾದ ವಿಷಯವಲ್ಲ. ಬೇರೆ ಬೇರೆ ಸಂದರ್ಭದಲ್ಲಿ ಬೇರೆ
ೇರೆ ಕಾರಣವಿರಬಹುದು. ಆದರೆ ಕವಿ ಉದ್ದೇಶಪೂರ್ವಕವಾಗಿ ಕೆಡಿಸದಿದ್ದರೂ
ಂದು ಕಾರಣದಿಂದ ಸಾಮಗ್ರಿಗೆ ಸರಿಯಾದ ರೂಪುಬಾರದೆ ಹೋಗಬಹುದು.
ಈ ಕಾರಣ ಯಾವುದೆಂದರೆ ಸಾಮಗ್ರಿಯ ಪಾಕದಲ್ಲಿ ಊಹೆ ಎಷ್ಟರಮಟ್ಟಿಗೆ ಸೇರಿದೆ
ನ್ನುವುದು. ಒಬ್ಬ ಕವಿ ವ್ಯಕ್ತಿಗಳನ್ನು ನಿರ್ಮಿಸಿ ನಾಟಕವನ್ನು ಬರೆದಿದ್ದೇನೆ ಎಂದು
ಳಿದುಕೊಂಡಿರಬಹುದು ; ಆಯಾ ವ್ಯಕ್ತಿಗೆ ತಕ್ಕ ಮಾತನ್ನು ಅದರ
ಾಯಲ್ಲಿಟ್ಟಿದೇನೆಂದು ಕೊಂಡಿರಬಹುದು. ಆದರೆ ಸ್ವಭಾವ ನಿರೂಪಣಕ್ಕೆ
ವಶ್ಯಕವಾದ ಊಹಾಶಕ್ತಿ ಕವಿಯಲ್ಲಿಲ್ಲದಿದ್ದರೆ ಅಥವಾ ಅಷ್ಟು ಊಹೆ ಆ
ಾಕದಲ್ಲಿ ಸೇರದಿದ್ದರೆ ಸ್ವಭಾವ ನಿರೂಪಣ ಅಪೂರ್ಣವಾಗುವುದು. ಇದರಿಂದ
ವ್ಯಕ್ತಿ ನಿಜವಾದ ವ್ಯಕ್ತಿಯಂತೆ ತೋರದೆ ಈ ಅಭಿಪ್ರಾಯವನ್ನು ಹೇಳುವುದಕ್ಕೆ
ಂದ ಗೊಂಬೆಯಂತೆ ಕಾಣುವನು. ಸರಿಯಾದ ನಾಟಕದಲ್ಲಿ ವ್ಯಕ್ತಿಯೇ ನಿಜವಾಗಿ
ುಖ್ಯ; ಅವನು ಆಡುವ ಈ ಮಾತು ಇನ್ನೊಂದು ಮಾತು. ಅವನ ಮಾತುಗಳಲ್ಲಿ
ಂದೆರಡು ಸರಿಯಲ್ಲದ ನಾಟಕದಲ್ಲಿ ಈ ಮಾತು ಮುಖ್ಯ; ಆ ವ್ಯಕ್ತಿ ಈ
ಾತನ್ನೂ ಇನ್ನೂ ಇದರಂತ ಹತ್ತು ಮಾತನ್ನೂ ಹೇಳುವುದಕ್ಕಾಗಿ
ರ್ಮಿತವಾಗಿರುವ ಪಾತ್ರ. ಇದಿಷ್ಟಕ್ಕೂ ಮುಖ್ಯ ಕಾರಣ ನಾಟಕ ಬರೆಯುವುದಕ್ಕೆ
ೇಕಾದ ಊಹೆಯನ್ನು ಬಳಸದೆ ಉಪನ್ಯಾಸ ಬರೆಯುವುದಕ್ಕೆ ಬೇಕಾದಷ್ಟು
ಾತ್ರ ಊಹೆಯನ್ನು ಬಳಸಿ ಕವಿ ಉಪನ್ಯಾಸ ಬರೆಯುವುದನ್ನು ಬಿಟ್ಟು ನಾಟಕ
ರೆಯುವುದು. ಆದರೆ, ಈ ಮೊದಲೇ ಹೇಳಿರುವಂತೆ ವಿಷಯ
ುಖ್ಯವಾದದ್ದಾದರೆ ಕವಿ ಅದನ್ನು ಉಪನ್ಯಾಸವಾಗಿ ಹೇಳಿದರೂ ನಾಟಕವಾಗಿ
ೇಳಿದರೂ ನಾವು ಅದನ್ನು ತಿಳಿದುಕೊಳ್ಳುವುದು ಅವಶ್ಯಕ, ಹಾಗೆ
ಳಿದುಕೊಳ್ಳುವುದಕ್ಕೆ ಕಾವ್ಯದ ರೂಪ ವಿಚಾರ ತಿಳಿದಿರುವುದು ಅವಶ್ಯಕ.

## ೨೪. ಕಾವ್ಯದ ಪದ್ಧತಿ

### ಮಾತಿನಿಂದ ಭಾವವು ವ್ಯಕ್ತವಾಗುವುದು

ಉತ್ತಮ ಕಾವ್ಯದ ರಸವನ್ನೆಲ್ಲ ಗ್ರಹಿಸಬೇಕಾದರೆ ನಾವು ಕಾವ್ಯ ತನ್ನ ಕಾರ್ಯವನ್ನು ಸಾಧಿಸುವುದರಲ್ಲಿ ಅವಲಂಬಿಸುವ ಪದ್ಧತಿಯನ್ನು ಸ್ವಲ್ಪಮಟ್ಟಿಗೆ ತಿಳಿದುಕೊಳ್ಳುವುದು ಅವಶ್ಯಕ. ಸಾಮಾನ್ಯವಾಗಿ ಮಾತನಾಡುವುದರಲ್ಲಿ ಕೂಡ ಉಕ್ತಿಯ ರೀತಿ ವ್ಯತ್ಯಾಸವಾದರೆ ನಮಗೆ ಸರಿಯಾಗಿ ಅರ್ಥವಾಗುವುದಿಲ್ಲ. ಮಾತು ಭಾವವನ್ನು ವ್ಯಕ್ತಗೊಳಿಸುವ ಸಾಧನ, ಮಾತನ್ನು ಕೇಳಿದವರು ಭಾವವನ್ನು ಅದರ ಸಹಾಯದಿಂದ ತಿಳಿಯಬೇಕು. ಕೆಲವು ಮಾತು ಹೇಗೋ ಕಾವ್ಯವೆಲ್ಲ ಹಾಗೆಯೇ, ಸಾಹಿತ್ಯವೆಲ್ಲ ಹಾಗೆಯೆ. ಅದರಲ್ಲಿ ಇರುವುದು ಮಾತು, ಅದರ ಸಾರಭಾವ, ಅವರಲ್ಲಿಯ ಮಾತಿನ ಮೂಲಕ ನಾವು ಅದರ ಭಾವವನ್ನು ಗ್ರಹಿಸಬೇಕು. ಹೀಗೆ ಆ ಭಾವವನ್ನು ಗ್ರಹಿಸುವುದಕ್ಕೆ ಆ ಮಾತಿನ ಸ್ವಭಾವವೂ ವ್ಯಂಜಕ ಶಕ್ತಿಯೂ ಎಷ್ಟು ಮಟ್ಟಿನವು ಎಂದು ಮಾತಿನ ಎಷ್ಟು ಭಾವದಿಂದ ಕವಿಯ ಹೃದಯದಲ್ಲಿ ಎಷ್ಟು ಭಾವವನ್ನು ಊಹಿಸ ಬೇಕೆಂದೂ ನಾವು ಯೋಚನೆ ಮಾಡುವುದು ಅವಶ್ಯಕ. ಇದು ಸಾಮಾನ್ಯವಾಗಿ ಉತ್ತಮ ಕಾವ್ಯದಲ್ಲೆಲ್ಲ ಒಂದು ರೀತಿಯಾಗಿ ಇರುತ್ತದೆ. ಇದನ್ನು ಸಾಹಿತ್ಯದ ಪದ್ಧತಿಯೆಂದು ಕರೆಯಬಹುದು.

### ಕಾವ್ಯದಲ್ಲಿ ಸೂಚನೆ ಮಾತ್ರ ಸಾಧ್ಯ

ಈ ಪದ್ಧತಿಯ ಮುಖ್ಯಾಂಶವೇನೆಂದರೆ; ಕಾವ್ಯವು ಆವೇಶದ ಸ್ವರೂಪವನ್ನು ಸೂಚಿಸುವುದು ಮಾತ್ರ ಸಾಧ್ಯ, ಆವೇಶವನ್ನೆಲ್ಲ ವರ್ಣಿಸುವುದು ಅದಕ್ಕೆ ಸಾಧ್ಯವಿಲ್ಲ. ಕಾವ್ಯಕ್ಕೆ ಕಾರಣವಾದ ಆವೇಶ ಆ ಕಾವ್ಯಕ್ಕಿಂತ ಗಾತ್ರದಲ್ಲಿ ಬಹಳ ದೊಡ್ಡದು; ಶಕ್ತಿಯಲ್ಲಿ ಅಧಿಕವಾದುದು, ಅನುಭವದಲ್ಲಿ ತೀವ್ರ. ಇದಕ್ಕೆ ಎರಡು ಕಾರಣಗಳುಂಟು. ಒಂದು ಕಾರಣ, ಮಾತು ಸಹಜವಾಗಿಯೂ ಅರ್ಥದ ಒಂದು ಭಾಗವನ್ನು ಮಾತ್ರ ಹೇಳಬಲ್ಲದು ಎಂಬುದು. ಕಾವ್ಯದಲ್ಲಿ ಇರುವುದು ಮಾತು, ಅದರ ಸಾರ ಭಾವ ಎಂದು ಮೇಲೆ ಹೇಳಿದೆ, ಮುಖ್ಯವಾಗಿ ಕಾವ್ಯ

ಭಾವವೇ ಹೊರತು ಮಾತಲ್ಲ. ಕವಿಯ ಹೃದಯದ ಅಧಿಕವಾದ ಭಾವ ಒಂದು ವರ್ಣ್ಣಮಾತಾಗಿ ರೂಪನ್ನು ತಾಳುತ್ತದೆ. ಅವನ ಕೆಲಸ ಆ ಭಾವವನ್ನು ವ್ಯಕ್ತಗೊಳಿಸುವುದು, ಆ ಮೂಲಕ ಓದುವವನಲ್ಲಿ ಅದೇ ಭಾವವನ್ನು ಉಂಟುಮಾಡುವುದು, ಆ ಕೆಲಸ ಮಾತುಗಳನ್ನು ಬರೆಯುವುದು ಮಾತ್ರವಲ್ಲ. ಎಂದರೆ ಸರಿಯಾದ ಭಾವವನ್ನು ಸರಿಯಾಗಿ ವ್ಯಕ್ತಪಡಿಸಿ ಪಾಠಕನಲ್ಲಿ ಅದೇ ಭಾವವನ್ನು ಉಂಟುಮಾಡುವುದಾದರೆ ಕಾವ್ಯದಲ್ಲಿ ಎಷ್ಟು ಮಾತು ಕಡಮೆಯಾಗಿದ್ದರೆ ಕಾವ್ಯ ಅಷ್ಟು ಒಳ್ಳೆಯದು.

ಕಾವ್ಯದ ಪದ್ಧತಿ ಸೂಚನೆ ಮಾತ್ರ ಆಗುವುದಕ್ಕೆ ಇನ್ನೊಂದು ಕಾರಣ ಇದು. ಕವನಕ್ಕೆ ಮೊದಲು ಸಾಮಗ್ರಿ ಒಂದು ಪಾಕಕ್ಕೆ ಬರಬೇಕು. ಹೀಗೆಂದರೆ ಏನೆಂದು ತಿಳಿಯುವುದು ಅಷ್ಟು ಸುಲಭವಲ್ಲ, ಆದರೆ ಸ್ವಲ್ಪ ವಿಚಾರದಿಂದ ಅದೂ ತಿಳಿಯುವುದು. ಕವಿಯ ಬುದ್ಧಿಯೂ ರಾಗಗಳೂ ಸಾಮಾನ್ಯನ ಬುದ್ಧಿ ರಾಗಗಳಿಗಿಂತ ಸೂಕ್ಷ್ಮ ಶಕ್ತಿಯುಳ್ಳವು ಎಂದು ಮೊದಲೇ ಹೇಳಿದೆ; ಅವನ ಅನುಭವ ಶಕ್ತಿ ಹೆಚ್ಚಾದುದೆಂದೂ ಹೇಳಿದೆ. ಪ್ರಪಂಚದ ಜೀವನದ ವಿಷಯ ಲೇಶದ ತೀಕ್ಷ್ಣವಾದ ಅನುಭವದ ದೆಸೆಯಿಂದ ಅವನ ಆತ್ಮ ತುಂಬಿದಾಗ ಕಾವ್ಯವು ಮಿಡಿಯ ಬೇಕಾಗುವುದು. ಪಾತ್ರೆಯನ್ನು ತುಂಬಿದ ಮೇಲೆ ಹೊರಗೆ ಹರಿಯುವ ರಸದಂತೆ ಕಾವ್ಯರಸವು ಕವಿಯ ಹೃದಯವನ್ನು ತುಂಬಿದ ಮೇಲೆಯೇ ಕಾವ್ಯವಾಗಿ ಪರಿಣಾಮವನ್ನು ಹೊಂದುವುದು. ನಾವು ಯಾರಾದರೂ ಕಷ್ಟವನ್ನು ನೋಡಿದರೆ ನಮ್ಮ ಮನಸ್ಸು ನೋಯುವುದು, ಆದರೆ ಆ ಕಷ್ಟ ಎಷ್ಟು ದಾರುಣವಾದದ್ದಾದರೂ ನಮಗೆ ಅದನ್ನು ಕುರಿತು ಏನನ್ನಾದರೂ ಬರೆಯೋಣವೆನ್ನುವಷ್ಟು ನೋವು ಉಂಟಾಗುವುದಿಲ್ಲ. ನಾವೇ ಒಂದು ಸಂಜೆಯ ಅಂದವನ್ನು ಅನುಭವಿಸಬಹುದು, ಅದರ ವಿಷಯದಲ್ಲಿ ಹತ್ತು ಮಾತನ್ನು ಹೇಳೋಣವೆಂದು ನಮಗೆ ಆಸೆ ಹುಟ್ಟುವುದಿಲ್ಲ, ಹತ್ತು ಮಾತನ್ನು ಬರೆಯೋಣವೆಂದು ನಮಗೆ ತೋರುವುದು ಆ ಮೊದಲೇ ಇಲ್ಲ. ನಮ್ಮ ಕಷ್ಟಾನುಭವವಾಗಲಿ ಸುಖಾನುಭವವಾಗಲಿ

ಇಲ್ಲದೆ ಹೋಗಲಿಲ್ಲ; ಆ ಅನುಭವ ಕಾವ್ಯದಲ್ಲಿ ರೂಪನ್ನು ಹೊಂದುವುದಕ್ಕೆ ಎಷ್ಟು ತೀವ್ರವಾಗಿರಬೇಕೊ ಅಷ್ಟು ತೀವ್ರವಾಗಿಲ್ಲ ಅಷ್ಟೆ. ತಾವು ಅನುಭವಿಸಿದ ಅಥವಾ ಅರಿತ ಕಷ್ಟ ಸುಖದ ವಿಚಾರವನ್ನು ಹೇಳಬೇಕೆಂದು ಸಾಮಾನ್ಯರಿಗೆ ತೋರುವುದಿಲ್ಲ. ಯಾವ ಮಟ್ಟದಲ್ಲಿ ಕವನ ಬೇಕಾಗುವುದೋ ಆ ಮಟ್ಟಕ್ಕೆ ಅವರ ಅನುಭವ ಏರುವುದಿಲ್ಲ. ಕವಿಯ ಅನುಭವ ಅದನ್ನು ಮೀರುತ್ತದೆ. ಆಗ್ಯೆ ಅದರ ಸ್ವಲ್ಪ ಭಾಗ ಕಾವ್ಯವಾಗಿ ಕಾಣುತ್ತದೆ.ಕಾಲಿನ ಮೇಲೆ ಕಲ್ಲು ಬಿದ್ದಾಗ ಅಯ್ಯೋ ಎನ್ನುವವನ ಆ ಒಂದು ಸ್ವರದಿಂದ ಅವನ ನೋವನ್ನು ತಿಳಿಯುವಂತೆ ತಂದೆ ಖರ್ಜೂರವನ್ನು ಕೊಡಬಂದಾಗ ನಗುತ್ತ ಕುಣಿಯುತ್ತ ಉಬ್ಬುವ ಮಗುವಿನ ಸಂತೋಷವನ್ನು ಅದರ ನಗುವಿನಿಂದ ತಿಳಿಯುವಂತೆ, ಕಾವ್ಯದಿಂದ ಕವಿಯ ಭಾವವನ್ನು ತಿಳಿಯಬೇಕು.ಅಲ್ಲದೆ ಕಾವ್ಯ ನಿರ್ಮಾಣಕ್ಕೆ ಮೊದಲು ಅನುಭವ ಸ್ತಿಮಿತಕ್ಕೆ ಬರಬೇಕಾದದ್ದರಿಂದಲೂ ಕಾವ್ಯದಲ್ಲಿ ಸೂಚನೆ ಮಾತ್ರ ಸಾಧ್ಯವಾಗುವುದು. ಅನುಭವ ಪರಿಪೂರ್ಣವಾಗಿರುವ ಅವಸ್ಥೆಯಲ್ಲಿ ಆ ಅನುಭವವನ್ನು ಕುರಿತ ಕಾವ್ಯ ನಿರ್ಮಾಣ ವಾಗುವುದಿಲ್ಲ; ಆ ಅವಸ್ಥೆಯಿಂದ ಸಮಾಧಾನಸ್ಥಿತಿಗೆ ಬರಲು ಆರಂಭವಾದಾಗ ಕವನ ಅವಶ್ಯಕ ವಾಗುವುದು. ಆವೇಶದ ಕೇಂದ್ರಗಳಲ್ಲಿ ಮಾತಿಗೆ ಅವಕಾಶವಿಲ್ಲ. ಇದನ್ನು ಕೆಲವರು ಕವಿಗಳೇ ಹೇಳಿದ್ದಾರೆ; ಎಲ್ಲರೂ ಊಹೆಯಿಂದ ಗ್ರಹಿಸಬಹುದು. ಅತಿ ಸಂತೋಷವಾದಾಗ ಯಾರೂ ಸಂತೋಷವನ್ನು ವರ್ಣಿಸತೊಡಗುವುದಿಲ್ಲ, ಅದನ್ನು ಅನುಭವಿಸುವರು. ಅತಿದುಃಖದಲ್ಲಿಯೂ ಹೀಗೆಯೇ; ಉಸಿರಾಡದೆ ಅದನ್ನು ತಡೆದುಕೊಳ್ಳುವರು. ಸುಖ ಅಥವಾ ದುಃಖದ ವೇಗ ಕಡಮೆಯಾದ ಮೇಲೆ ಅದರ ಮಾತನ್ನು ಆಡುವರು. ಇದರಂತೆಯೇ ಕವಿಯ ಅನುಭವವೂ, ಕಾವ್ಯ ಬರೆಯಬೇಕಾದರೆ ಅನುಭವದ ವೇಗ ತಗ್ಗಬೇಕು. ವೇಗ ತಗ್ಗದ ಅನೇಕ ಅನುಭವಾಂಶ ಕಾವ್ಯದಲ್ಲಿ ವ್ಯಕ್ತರೂಪವನ್ನು ಧರಿಸುವುದೇ ಇಲ್ಲ. ತೀರಿಹೋದ ಮಗನ ಗುಣಗಳನ್ನು ಕೆಲವು ವರ್ಷಗಳ ಮೇಲೆ ತಂದೆ ವರ್ಣಿಸಬಹುದು, ಅವನ ದುಃಖದ ವೇಗ ಮಾತಿನ ಮಟ್ಟಕ್ಕೆ ತಗ್ಗುವುದು, ಅವನ್ನು ತಾಯಿ ವರ್ಣಿಸಲಾರಳು,

ಅವಳು ಮಗನನ್ನು ನೆನೆದು ಕೊರಗುವಳು, ಅವಳ ದುಃಖದ ವೇಗ ಮಾತಿನ ಮಟ್ಟಕ್ಕೆ ತಗ್ಗುವುದಿಲ್ಲ. ಹೀಗೆ ಕವಿಯ ಅನುಭವದ ಕೇಂದ್ರ ಕಾವ್ಯದಲ್ಲಿ ನೆನವಿನಿಂದ ಅಲ್ಲದೆ ಪ್ರತ್ಯಕ್ಷವಾಗಿ ರೂಪನ್ನು ಹೊಂದುವುದಿಲ್ಲ. ಕಾವ್ಯದಲ್ಲಿ ತೋರುವುದು ಕವಿಯ ಅನುಭವದ ಸ್ವಲ್ಪಭಾಗ ಮಾತ್ರ; ಅದೂ ವೇಗದಲ್ಲಿ ಕಡಿಮೆಯಾದ ಮೇಲೆ.

### ಸೂಚನೆ ಕುಶಲಕಲೆಗಳ ಸಾಮಾನ್ಯಪದ್ಧತಿ

ಸಂಕೇತದಿಂದಲೂ ಸೂಚನೆಯಿಂದಲೂ ಭಾವಗಳನ್ನು ವ್ಯಕ್ತಗೊಳಿಸುವುದು ಕುಶಲ ಕಲೆಗಳಿಗೆಲ್ಲ ಸಾಮಾನ್ಯವಾದ ಲಕ್ಷಣ. ಇದರಲ್ಲಿ ಇನ್ನೆರಡು ಕಲೆಗಳ ಪದ್ಧತಿಯಿಂದ ಸಾಹಿತ್ಯದ ಪದ್ಧತಿ ಸ್ವಲ್ಪಮಟ್ಟಿಗೆ ಬೇರೆಯಾಗಿರುವುದು. ಹೀಗೆ ಬೇರೆಯಾಗಿರುವುದರ ದೆಸೆಯಿಂದ ಸಾಹಿತ್ಯದಲ್ಲಿ ಇತರ ಕುಶಲ ಕಲೆಗಳಲ್ಲಿಲ್ಲದ ಒಂದೆರಡು ಆನುಕೂಲ್ಯಗಳುಂಟು. ಇದನ್ನು ಇಲ್ಲಿ ಸ್ವಲ್ಪ ವಿಚಾರಮಾಡಿ ನೋಡಬಹುದು. ಕಾವ್ಯದ ಸಂಕೇತ ಚಿತ್ರ ಶಿಲ್ಪ ಸಂಗೀತಗಳ ಸಂಕೇತಕ್ಕಿಂತ ಸುಲಭ ಅಥವಾ ಸ್ಪಷ್ಟವಾದುದು. ಚಿತ್ರ ಶಿಲ್ಪಗಳನ್ನು ತಿಳಿಯಬೇಕಾದರೆ ಅವುಗಳಲ್ಲಿ ಶಿಕ್ಷೆಯನ್ನು ಪಡೆದಿರಬೇಕು. ಸ್ವಭಾವತಃ ಬಂದಿರಬಹುದಾದ ಒಂದು ಪ್ರತಿಭೆಯೂ ಇರಬೇಕು. ಈ ಪ್ರತಿಭೆ ಹೆಚ್ಚಾಗಿ ಇದ್ದರೆ ಶಿಕ್ಷೆಯಿಂದ ಆಗಬೇಕಾದುದು ಬಹಳ ಇಲ್ಲ, ಆದರೆ ಇದು ಹೆಚ್ಚಾಗಿ ಇರುವುದು ಅಪೂರ್ವ. ಅಲ್ಲದೆ, ಅದು ಎಷ್ಟೇ ಇದ್ದರೂ ಈ ಕಲೆಗಳ ಸಂಕೇತದ ಪದ್ಧತಿಯನ್ನು ಶಿಕ್ಷೆಯಿಂದಲೇ ತಿಳಿಯಬೇಕು, ಕಾವ್ಯವಲ್ಲಿ ಹೀಗಲ್ಲ, ಕಾವ್ಯದ ಸಾಧನವಾದ ಮಾತು ಮನುಷ್ಯನು ವ್ಯವಹಾರಕ್ಕಾಗಿ ಮಾಡಿಕೊಂಡಿರುವ ಎಲ್ಲ ಸಂಕೇತಗಳಲ್ಲಿ ಅತ್ಯಂತ ಸುಲಭವಾದದ್ದು; ಮಾತಿಲ್ಲದೆ ಚರ್ಯೆಗಿಂತಲೂ ನಿರಾಕಾರವಾದ ಧ್ವನಿಗಿಂತಲೂ ಅದು ಸ್ಪಷ್ಟ, ಸುಲಭ. ಚರ್ಯೆ ಶಿಲ್ಪ ಚಿತ್ರಗಳ ಸಂಕೇತ, ಧ್ವನಿ ಸಂಗೀತದ ಸಂಕೇತ, ಮಾತು ಕಾವ್ಯದ ಸಂಕೇತ ಇದರಿಂದ ಶಿಲ್ಪಚಿತ್ರಗಳೂ ಸಂಗೀತವೂ ಕೆಲವರಿಗೆ ಮಾತ್ರ ಅರ್ಥವಾದರೆ ಸಾಹಿತ್ಯ ಅನೇಕರಿಗೆ ಅರ್ಥವಾಗುವ ಕಲೆಯಾಗಿದೆ. ಒಂದು ಚಿತ್ರವನ್ನು ನೋಡಿದೆವೆನ್ನಿ, ಅದರ ಸೊಗಸು ಏನೋ

ನಮಗೆ ತಿಳಿದಂತೆ ತೋರಬಹುದು, ಆದರೆ ಚಿತ್ರದಲ್ಲಿ ಬರಿಯ ಆ ಸೊಗಸು ಎನ್ನುವುದು ಮಾತ್ರವಲ್ಲ, ಒಂದು ಭಾವವೂ ಇರುತ್ತದೆ. ಅದನ್ನು ತಿಳಿಯುವುದು ಕಷ್ಟ. ಒಂದು ರಾಗದ ಆಲಾಪನೆಯನ್ನು ಕೇಳಿದೆವೆನ್ನಿ. ಕುಶಲನಾದ ಗಾಯಕನು ಒಂದು ರಾಗದ ಆಲಾಪನೆಯಲ್ಲಿ ಹೆಜ್ಜೆಹೆಜ್ಜೆಗೆ ರಸವನ್ನು ಬೇರೆ ಮಾಡುವನು. ಒಂದು ನಿಮಿಷ ಭಕ್ತಿ, ಒಂದು ನಿಮಿಷ ಪ್ರೀತಿ, ಒಂದು ನಿಮಿಷ ಭಯ, ಒಂದು ನಿಮಿಷ ಕರುಣೆ. ಊಹೆ ಇಲ್ಲದವನಿಗೆ ಇದೆಲ್ಲ ಒಂದೇ ಮಾದರಿಯಾಗಿ ಕೇಳುವುದು. ಸಾಹಿತ್ಯದಲ್ಲಿ ಶಿಲ್ಪ ಚಿತ್ರಗಳ ಭಾವವನ್ನೇ ಮಾತಿನಲ್ಲಿ ಹೇಳುವುದರಿಂದ ಹೆಚ್ಚು ಜನರಿಗೆ ಅವನ್ನು ತಿಳಿದುಕೊಳ್ಳುವುದು ಸಾಧ್ಯವಾಗುವುದು; ಒಂದು ಆಲಾಪನೆಯ ನಾಲ್ಕಾರು ಭಾವಗಳನ್ನು ಗಾನದಲ್ಲಿ ಇರುವುದಕ್ಕಿಂತ ಮಾತಿನಲ್ಲಿ ಸ್ಪಷ್ಟವಾಗಿ ವ್ಯಕ್ತಪಡಿಸಬಹುದು. ಕುಶಲಕಲೆಯೆಲ್ಲವೂ ನಮ್ಮ ರಾಗವನ್ನು ಮುಟ್ಟಲು ಪ್ರಯತ್ನಿಸುವುವಷ್ಟೆ. ಚಿತ್ರಶಿಲ್ಪಗಳು ತಮ್ಮ ತಮ್ಮ ಸಾಧನೆಗಳಿಂದ ಒಂದು ಕರಣದ ಮೂಲಕ, ಗಾನವು ತನ್ನ ಸಾಧನದಿಂದ ಇನ್ನೊಂದು ಕರಣದ ಮೂಲಕ, ಈ ಯತ್ನದಲ್ಲಿ ತೊಡಗುವುವು. ಇವುಗಳ ಸಾಧನದಲ್ಲಿ ಸೌಕರ್ಯ ಕಡಮೆ. ಸಾಹಿತ್ಯವು ಗಾನದ ಕರಣವನ್ನೇ ಉಪಯೋಗಿಸಬಹುದಾದರೂ ಅದರ ಸಾಧನವು ಅವುಗಳ ಸಾಧನಗಳಿಗಿಂತ ಸುಕರವಾದುದು. ಇದಲ್ಲದೆ ಸಾಹಿತ್ಯಕ್ಕೆ, ಒಂದು ವಿಷಯದಲ್ಲಿ ಶಿಲ್ಪ ಚಿತ್ರಗಳಿಗಿಂತಲೂ ಇನ್ನೊಂದು ವಿಷಯದಲ್ಲಿ ಸಂಗೀತಕ್ಕಿಂತಲೂ, ಹೆಚ್ಚಾದ ಅನುಕೂಲ ಉಂಟು. ಶಿಲ್ಪಕಾರನಾಗಲಿ ಚಿತ್ರಗಾರನಾಗಲಿ ಒಂದು ಅವಸ್ಥೆಯನ್ನು ಚಿತ್ರಿಸಬಹುದು; ಅದರ ಹಿಂದೆ ನಡೆದದ್ದೇನು ಆಮೇಲೆ ಮುಂದೆ ಬಂದದ್ದೇನು ಎಂಬುದನ್ನು ಬೇರೊಂದು ಪ್ರಯತ್ನದಿಂದ ಅಲ್ಲದೆ ಚಿತ್ರಿಸುವುದು ಅವರಿಗೆ ಸಾಧ್ಯವಲ್ಲ. ಕಾವ್ಯದಲ್ಲಿ ಇಂಥ ಅವಸ್ಥೆಗಳ ಸರಣಿಯನ್ನು ವರ್ಣಿಸಬಹುದು. ಇದರಿಂದ ಶಿಲ್ಪ ಎಷ್ಟು ನಷ್ಟವನ್ನು ಅನುಭವಿಸುವುದೆಂಬುದು ನಮ್ಮ ಪೂರ್ವದ ಶಿಲ್ಪದ ವಿಚಾರವಾಗಿ ಅಲ್ಪರಸಜ್ಞರು ಹೇಳಿರುವ ಮಾತುಗಳನ್ನು ನೆನೆದವರಿಗೆಲ್ಲ ತಿಳಿಯುವುದು. ಬುದ್ಧನ ವಿಗ್ರಹವು ಯಾವಾಗಲೂ ಒಂದೇ ಸ್ಥಾಯಿಯಲ್ಲಿ

ನಿರ್ಮಿತವಾಗುತ್ತಿದ್ದದು ಏತಕ್ಕೆ? ಶಿಲ್ಪವನ್ನು ನೋಡುವವನು ಒಂದು ಸ್ಥಾಯಿಯನ್ನು ಮಾತ್ರ ನೋಡಬಹುದು, ಶಿಲ್ಪಿ ಒಂದು ಸ್ಥಾಯಿಯನ್ನು ಮಾತ್ರ ತೋರಿಸಬಹುದು. ಬುದ್ಧನ ಚರಿತ್ರೆಯನ್ನು ಕುರಿತು ಶಿಲ್ಪಿ ಒಂದು ಶಿಲ್ಪವನ್ನು ನಿರ್ಮಿಸುವುದಾದರೆ ಅದರಲ್ಲಿ ಯಾವ ವಿಷಯವನ್ನು ನಿರ್ಮಿಸಬೇಕು? ಗೌತಮನು ಹುಡುಗನಾಗಿ ಅರಮನೆಯಲ್ಲಿ ಸುಖದಲ್ಲಿ ಬೆಳೆಯುತ್ತಿದ್ದದನ್ನೆ ಮದುವೆಯಾದ ಮೇಲೆ ಪತ್ನಿಯೊಡನೆ ಸರಸವಾಗಿದ್ದದನ್ನೆ? ಯುವರಾಜನಾಗಿ ರಾಜ್ಯವು ತನಗೆ ಬಂದೀತೆಂದು ಅಸುಖಿಯಾಗಿರುತ್ತಿದ್ದದನ್ನೆ ? ಪತ್ನಿಯನ್ನು ಬಿಟ್ಟು ಅರ್ಧರಾತ್ರಿಯಲ್ಲಿ ಕಾಡಿಗೆ ಹೋದದ್ದನ್ನೆ ? ಇವು ಯಾವವನ್ನೂ ಅಲ್ಲ. ಅವನು ಆಮೇಲೆ ಶಾಂತಭಾವವನ್ನು ತಾಳುವುದಕ್ಕೆ ಪಟ್ಟ, ಪ್ರಯತ್ನಗಳನ್ನೆ ? ಅದನ್ನೂ ಅಲ್ಲ. ಇವನ್ನೆಲ್ಲ ನೀಗಿ ಶಾಂತನಾಗಿ ಅಂತರಂಗದಲ್ಲಿ ಪರಮಾತ್ಮನನ್ನು ಕಂಡು ಸೌಮ್ಯವಾಗಿ ಕುಳಿತ ಸ್ಥಾಯಿ ಅವನ ಜೀವನ ಚರಿತ್ರೆಯಲ್ಲಿ ಮುಖ್ಯವಾದ ಸ್ಥಾಯಿ. ಬುದ್ಧನ ಜೀವನ ಚರಿತ್ರೆಯಲ್ಲಿ ಒಂದೇ ಒಂದು ಸ್ಥಾಯಿಯನ್ನು ತೋರಿಸುವುದಾದರೆ ಶಿಲ್ಪಿ ತೋರಿಸಬೇಕಾದದ್ದು ಈ ಸ್ಥಾಯಿ, ಇತರರು ನೋಡಬೇಕಾದದ್ದು ಈ ಸ್ಥಾಯಿ. ಇದರಿಂದಲೇ ಬುದ್ಧನ ವಿಗ್ರಹ ಯಾವಾಗಲೂ ಈ ಒಂದು ಸ್ಥಾಯಿಯಲ್ಲಿ ಚಿತ್ರಿತವಾಯಿತು. ತಿಳಿಯದವರು ನಮ್ಮ ಶಿಲ್ಪಿಗಳಿಗೆ ಬೇರೆ ಯಾವ ಸ್ಥಾಯಿಯನ್ನೂ ಶಿಲ್ಪಿಸುವುದಕ್ಕೆ ಬರುತ್ತಿರಲಿಲ್ಲವೆಂದೂ ಆದರಿಂದಲೇ ಅವರು ಹಾಡಿದ್ದನ್ನು ಹಾಡುತ್ತಿದ್ದರೆಂದು ಹೇಳುತ್ತಾರೆ. ಇದು ತಿಳಿಯದವರು ಹೇಳಬಹುದಾದ ಮಾತು. ಕೊನೆಕೊನೆಯಲ್ಲಿ ಕಾಲದಲ್ಲಿ ಬರಿಯ ಒಂದೇ ಮಾದರಿಯ ವಿಗ್ರಹವನ್ನು ಮಾಡಿಮಾಡಿ ವಾಡಿಕೆಯಿಂದ ವ್ಯುತ್ಪತ್ತಿ ಶೂನ್ಯರಾದ ಶಿಲ್ಪಕಾರರು ಇದ್ದಿರಬಹುದು. ಮೊದಲಲ್ಲೂ ಶಿಲ್ಪಿಗಳೆಲ್ಲ ಒಂದೇ ರೀತಿಯ ವ್ಯುತ್ಪತ್ತಿಯನ್ನು ಹೊಂದಿ ಇದ್ದಿರಲಾರರು. ಆದರೆ ಆ ಸೌಮ್ಯವಾದ ಆ ಸುಂದರಾಕಾರವನ್ನು ಆ ಒಂದು ಸ್ಥಾಯಿಯಲ್ಲಿ ಗಾಳಿಯಿಲ್ಲದ ಸ್ಥಳದ ನಿಶ್ಚಲಜ್ಯೋತಿಯಂತೆ ನಿರ್ಮಿಸುವುದನ್ನು ತಿಳಿದಿದ್ದ ಶಿಲ್ಪಿ ಅದಕ್ಕಿಂತ ಕಡಮೆಯಾದ ಯಾವ ಅವಸ್ಥೆಯನ್ನು ನಿರ್ಮಿಸಲಾರದವನೆನ್ನಬಹುದು? ಶಿಲ್ಪದಲ್ಲಿ

ಮುಖ್ಯವಾದುದು ಜೀವದ ಕಳೆ, ಜೀವದ ಚಿಹ್ನೆಯಲ್ಲ; ಯಾವ ಒಂದು ಚಲನದ ಅವಸ್ಥೆಯೂ ಅಲ್ಲ, ಯಾವ ಅವಸ್ಥೆಯಾದರೂ ಸಾಧ್ಯವೆಂಬಂತಿರುವ ನಿಲುವು, ಹಲ್ಲನ್ನು ಕಾಣಿಸುವ ನಗು ಅಲ್ಲ. ನಕ್ಕರೂ ನಗಬಹುದು ಎಂಬಂತೆ ಇರುವ ಮುಖದ ಪ್ರಭೆ. ಇಷ್ಟನ್ನು ಬಲ್ಲ ಶಿಲ್ಪಿಯೂ ಕೂಡ ಬುದ್ಧನ ಜೀವನ ಚರಿತ್ರೆಯಲ್ಲಿ ಒಂದು ಅವಸ್ಥೆಯನ್ನು ಮಾತ್ರ ಚಿತ್ರಿಸಿ ಉಳಿದದ್ದನ್ನು ಬಿಡುತ್ತಿದ್ದನು. ಕಾವ್ಯದಲ್ಲಾದರೆ ಎಲ್ಲಾ ಸ್ಥಿತಿಗಳನ್ನೂ ವರ್ಣಿಸಬಹುದಾಗಿತ್ತು. ಶಿಲ್ಪದಿಂದ ಈ ಭಾಗದಲ್ಲಿ ಹೇಗೋ ಹಾಗೆ ಕಾವ್ಯವು ಸಂಗೀತದಿಂಧ ಇನ್ನೊಂದು ಭಾಗದಲ್ಲಿ ಹೆಚ್ಚು ಅನುಕೂಲ್ಯವನ್ನು ಹೊಂದಿದೆ. ಸಂಗೀತಗಾರನು ಹತ್ತಾರು ರಸಗಳನ್ನು ವ್ಯಕ್ತಗೊಳಿಸುವ ಆಲಾಪನದಲ್ಲಿ ಹತ್ತಾರು ಅವಸ್ಥೆಗಳನ್ನು ವರ್ಣಿಸಬಹುದು. ಆದರೆ ಅವನು ಹಾಗೆ ವರ್ಣಿಸುವ ಶಕ್ತಿ ಬಂದಾಗ ಸಾಧಿಸುವ ಗತಿಗಳನ್ನು ನಾವು ಹಿಡಿದು ನಿಲ್ಲಿಸುವುದಕ್ಕಾಗುವುದಿಲ್ಲ. ಸಂಜೆಯ ಆಕಾಶದ ವರ್ಣದ ವೈಖರಿಯಂತೆ ಗೀತದ ಈ ಇಂದ್ರಜಾಲ ಆ ಕ್ಷಣಮಾತ್ರಕ್ಕೆ ನಮ್ಮದು, ಉತ್ತರ ಕ್ಷಣದಲ್ಲಿ ನಮ್ಮದಲ್ಲ. ಅಲ್ಲದೆ ಗಾನವನ್ನು ಒಂದು ಸಲ ನುಡಿಸಿದಂತೆ ಇನ್ನೊಂದು ಸಲ ನುಡಿಸುವುದಕ್ಕೆ ಗಾಯಕನಿಗೇ ಸಾಧ್ಯವಿಲ್ಲ. ಕಾವ್ಯವಾದರೋ ಕವಿಯಿಂದ ನಿರ್ಮಾಣವಾದ ಮೇಲೆ ಬರವಣಿಗೆಯಿಂದ ಬಹುಮಡಿಯ ಪ್ರತಿಗಳಾಗಬಲ್ಲದು. ಈ ಕಾರಣದಿಂದ ಶಿಲ್ಪ ಹತ್ತು ಜನರನ್ನು ಮುಟ್ಟುವ ಕಡೆ ಕಾವ್ಯ ಸಾವಿರ ಜನರನ್ನು ಮುಟ್ಟಬಲ್ಲದು; ಶಿಲ್ಪಕ್ಕೆ ಸಾಧ್ಯವಲ್ಲದ ಅನೇಕ ಅವಸ್ಥೆಗಳನ್ನು ಕಾವ್ಯ ವರ್ಣಿಸಬಹುದು, ಸಂಗೀತ ಒಂದು ಸ್ಥಳದಲ್ಲಿ ಒಂದು ಸಭೆಗೆ ಕೊಡುವ ಸುಖವನ್ನು ಕಾವ್ಯ ತಲೆತಲೆಮಾರಿಗೆ ಜನರು ಇದ್ದಲ್ಲೆಲ್ಲ ಅವರಿಗೆ ಕೊಡಬಲ್ಲದು, ಬರೆದವನಿಗೆ ಕೂಡ ಬರೆದ ಮೇಲೆ ಆಹಾ ಇದು ಎಷ್ಟು ಚೆನ್ನಾಗಿದೆ ಎಂದು ತೋರುವಂತೆ ಕೃತಿಯಲ್ಲಿ ರಸವನ್ನು ಕಟ್ಟಿ ಇಡಬಲ್ಲದು. ಹೀಗೆ ತನ್ನ ಅತಿಶಯ ಸೌಲಭ್ಯದಿಂದ ಸಾಹಿತ್ಯ ಅದರ ಜತೆಯ ಕುಶಲಕಲೆಗಳಿಗೆ ಸಾಧ್ಯವಿಲ್ಲದ ರೀತಿಯಲ್ಲಿ ಜನರಿಗೆ ರಾಗಸಂಸ್ಕಾರವನ್ನು ಉಂಟುಮಾಡುವುದು. ಈ ಸೌಲಭ್ಯ ಸಾಹಿತ್ಯದ ಸಾಧನದ ದೆಸೆಯಿಂದಲೂ ಪದ್ಧತಿಯ ದೆಸೆಯಿಂದಲೂ ಅದಕ್ಕೆ ಬಂದಿರತಕ್ಕದ್ದು.

# ೨೫. ಸಾಹಿತ್ಯದಲ್ಲಿ ಮಾರ್ಗಗಳು

## ಸ್ವಾತಂತ್ರ್ಯ ಮಾರ್ಗ ಸಿದ್ಧಾಂತ ಮಾರ್ಗ

ಕಾವ್ಯದಲ್ಲಿ ಸಾಮಗ್ರಿರೂಪ ಪದ್ಧತಿಗಳಲ್ಲದೆ ಇನ್ನೊಂದು ಮುಖ್ಯವಾದ ಅಂಶ ಉಂಟು. ಇದನ್ನು ಮಾರ್ಗವೆನ್ನಬಹುದು. ಕಾವ್ಯ ಎಷ್ಟರ ಮಟ್ಟಿಗೆ ನಿಯಮ ಬದ್ಧವಾಗಿರಬೇಕು, ಎಷ್ಟರ ಮಟ್ಟಿಗೆ ಸ್ವತಂತ್ರಿಸಬಹುದು ಎಂಬುದು ಇಲ್ಲಿಯ ವಿಚಾರ. ನಮ್ಮ ಸಾಹಿತ್ಯಗಳಲ್ಲಿ ಬಹುಕಾಲದಿಂದ ಪ್ರಾಯಶಃ ಈ ರೀತಿಯ ಆಲೋಚನೆ ಬಂದಿಲ್ಲ. ನಮ್ಮ ಹಿರಿಯರ ಜೀವನ ಹೇಗೆ ಒಂದು ಅಚ್ಚಿನಲ್ಲಿ ಬಿದ್ದು ನೆಮ್ಮದಿಗಾಗಿ ನಡೆದುಬಂದಿತೋ ಹಾಗೆ ಅದರ ಸಾಹಿತ್ಯವೂ ಒಂದು ಅಚ್ಚಿನಲ್ಲಿ ಬಿದ್ದು ಈ ವಿಧವಾದ ಶಂಕೆಯನ್ನರಿಯದೆ ನೆಮ್ಮದಿಯಾಗಿ ನಡೆದುಬಂದಿದೆ. ಈಗ ನಮ್ಮ ಜೀವನವು ಕಾವ್ಯವೂ ಆ ಸುಪ್ರಶಾಂತವಾದ ಸರೋವರವನ್ನು ಬಿಟ್ಟು, ಸಾಗರದ ಮುಖವಾಗಿ ಕಾಡಿನಲ್ಲಿ ಹರಿಯುತ್ತಿವೆ. ಹಿಂದಯೇ ಒಬ್ಬ ಕವಿ ಮುರಾರಿಯದಾರಿ ಮೂರನೆಯದಾರಿ ಎಂದನು. ಈಗ ದಾರಿಗಳಿಗೆ ಸಂಖ್ಯೆಯಿಲ್ಲದೆ ಹೋಗಿದೆ. ಆದ್ದರಿಂದ ಈ ವಿಷಯವನ್ನು ಸ್ವಲ್ಪಮಟ್ಟಿಗೆ ವಿಚಾರಮಾಡುವುದು ಅವಶ್ಯಕ.

ಕಾವ್ಯದಲ್ಲಿ ಮಾರ್ಗವು ಸಾಮಗ್ರಿಯಂತಾಗಲಿ ಪದ್ಧತಿಯಂತಾಗಲಿ ಅಂತರ್ಗತವಾದದ್ದಲ್ಲ ಅವನ್ನು ಲಾಕ್ಷಣಿಕರು ಹೇಳಿಕೊಡಬೇಕಾದದ್ದಲ್ಲ ಮಾರ್ಗವನ್ನು ಲಾಕ್ಷಣಿಕರು ಹೇಳಿಕೊಡಬಹುದು. ಅವು ಕಾವ್ಯದಾತ್ಮವನ್ನು ಸ್ವಭಾವವನ್ನು ಕುರಿತವು; ಇದು ಕಾವ್ಯದ ದೇಹವನ್ನು ಕುರಿತದ್ದು. ಆವೇಶವು ಸಂಪೂರ್ಣವಾಗಿದ್ದು ಅದು ರೂಪವನ್ನು ಹೊಂದುವುದು ಮಾತ್ರ ಕವಿಗೆ ಬೇಕಾಗಿದ್ದಲ್ಲಿ ಅವನು ಮಾರ್ಗವನ್ನು ಕುರಿತು ಯೋಚಿಸಬೇಕಾದದ್ದಿಲ್ಲವೆಂದು ಕೆಲವರಿಗೆ ತೋರಬಹುದು. ನದಿ ಗುಡ್ಡದಿಂದ ಇಳಿದು ಹೋಗಬೇಕಾದಾಗ ತಗ್ಗಾದ ಜಾಗವನ್ನು ತಾನೇ ಸೇರಿ ಇಳಿದು ಹರಿಯುವುದು. ಆದರೆ ಮಾರ್ಗ ಹೀಗೆ ಬರಬೇಕಾದರೆ ಆವೇಶ ಪ್ರಬಲವಾದುದಾಗಿರಬೇಕು. ಸಾಮಾನ್ಯವಾಗಿ ಎಷ್ಟೋ

ಉತ್ತಮ ಕಾವ್ಯವಾಗಿದ್ದರೂ ಅದರ ಮೂಲದ ಆವೇಶ ಇಷ್ಟು ಪ್ರಬಲ ವಾದದ್ದಾಗಿರುವುದಿಲ್ಲ. ಇದರಿಂದ ಕವಿ ಮಾರ್ಗವನ್ನು ಕುರಿತು ಸ್ವಲ್ಪ ಯೋಚಿಸಬೇಕಾಗುತ್ತದೆ. ಕಾವೇರಿ ಸಮುದ್ರದ ಸಮೀಪದಲ್ಲಿ ಮೈದಾನದಲ್ಲಿ ಹರಡಿ ಹತ್ತಾರು ಪ್ರವಾಹವಾಗುವುದು, ಇನ್ನೂ ಮೇಲೆಯೂ ಒಂದೇ ಪ್ರವಾಹವಾಗಿರವುದು, ಕೊಡಗನ್ನು ಬಿಟ್ಟೊಡನೆ ಅಲ್ಲಿಯ ಧಾಟಿಯೂ ತಪ್ಪುವುದು. ಹೀಗೆ ದಾರಿಯನ್ನು ಹುಡುಕುವುದೆಂಧರೇನು? ಲಾಕ್ಷಣಿಕರ ಸಹಾಯವನ್ನು ಪಡೆಯಬಹುದೆಂದು ಮೊದಲು ಹೇಳಿದೆ. ಎಂದರೆ ತಕ್ಷಣ ಗ್ರಂಥವನ್ನೇ ಓದಬೇಕೆಂದು ಅಲ್ಲ, ಕಾವ್ಯಗಳನ್ನು ಓದಿ ಮಾರ್ಗವನ್ನು ಕಲಿಯಬಹುದು. ಏಕೆಂದರೆ ಲಕ್ಷಣ ಗ್ರಂಥದ ಮೂಲ'ಉತ್ತಮ ಕಾವ್ಯ, ಮತ್ತು ಉತ್ತಮ ಕವಿ ಲಾಕ್ಷಣಿಕರಲ್ಲಿ ಅಗ್ರಗಣ್ಯನು, ಪ್ರತಿಯೊಬ್ಬ ಕವಿಯೂ ತನ್ನ ಹಿಂದಣ ಕವಿಗಳಿಂದ ಮಾರ್ಗವನ್ನು ಕಲಿಯಬಹುದು, ಪ್ರಾಯಶಃ ಕಲಿಯಲೂ ಕಲಿಯುವನು. ಆವೇಶದ ಬಲ ಕಡಮೆಯಾದ ಹಾಗೆ ಈ ಕವಿಗೆ ಅವಶ್ಯಕತೆ ಹೆಚ್ಚುತ್ತದೆ. ಆವೇಶ ಪ್ರಬಲವಾಗಿದ್ದು ಕವಿ ಸಹಜವಾಗಿ ಅವಲಂಬಿಸುವ ಮಾರ್ಗವನ್ನು ಸಿದ್ಧಾಂತಮಾರ್ಗವೆಂದೂ ಕಲಿವಿನಿಂದ ಬರುವ ಮಾರ್ಗವನ್ನು ಸ್ವತಂತ್ರಮಾರ್ಗವೆಂದೂ ಹೇಳಬಹುದು. ಇವನ್ನು ಇಂಗ್ಲೀಷಿನಲ್ಲಿ Romantic ಮತ್ತು Classic ಎಂದು ಕರೆಯುತ್ತಾರೆ. ಈ ಮಾತುಗಳ ಸಾಮಾನ್ಯವಾದ ಅರ್ಥದಲ್ಲಿ ಈ ಎರಡು ಮಾರ್ಗಗಳಿಗೆ ಇರುವ ವ್ಯತ್ಯಾಸ ಹೊರಪಡುವುದಿಲ್ಲ. ಆದರೆ ಈ ವಿಷಯ ಇಂಗ್ಲೀಷ್ ಸಾಹಿತ್ಯದಲ್ಲಿ ಮೊದಲು ಚರ್ಚೆಗೆ ಬಂದಾಗ ಈ ಮಾತುಗಳನ್ನು ಉಪಯೋಗಿಸಿದರಾದ್ದರಿಂದ ಅವೇ ಈಗಲೂ ಉಪಯೋಗದಲ್ಲಿ ಇವೆ. ಅವರ ಚರಿತ್ರೆಯ ಹದಿನೆಂಟನೆಯ ಶತಮಾನದ ಉದ್ದಕ್ಕೂ ನಿಯಮನಿಬದ್ಧ ಕಾವ್ಯಮಾಲೆ ಬೆಳೆದು ಆಮೇಲೆ ಬಂದ ಕೆಲವರು ಈ ನಿಯಮಗಳಿಂದ ಬಿಡುಗಡೆಯನ್ನು ಪಡೆದು ಬೇರೆ ಮಾರ್ಗಗಳಲ್ಲಿ ಕಾವ್ಯಗಳನ್ನು ಬರೆದರು. ಇದನ್ನು ವಿಮರ್ಶಕರು Romantic Revival ಎಂದು ಕರೆದರು. ಆದರೆ ಎಷ್ಟೇ "ರೊಮ್ಯಾಟಿಕ್" ಆದ ಕತೆಯೂ ಕಾವ್ಯವೂ "ಕ್ಲಾಸಿಕ್" ಆಗಿ ಇರಬಹುದು.

ಮುಖ್ಯವಾಗಿ ನಿಯಮನಿಬದ್ಧವೆನ್ನುವಲ್ಲಿ ನಿಯಮವೆನ್ನುವುದು. ಈ ಮೊದಲು ಹೇಳಿರುವಂತೆ ಉತ್ತಮ ಕಾವ್ಯಗಳಿಂದ ತಿಳಿದ ನಿಯಮ ಹೊರತು ಹೊರಗಣಿಂದ ಆರೋಪಿಸಿದ್ದು ಅಲ್ಲ. ಉತ್ತಮ ಸಾಹಿತ್ಯ ಬೆಳೆದಹಾಗೆ ನಿಯಮಗಳೂ ಬೆಳೆಯುವುವು. ಇವು ಸಂಕೋಲೆಗಳಾಗಿ ಪರಿಣಮಿಸಬೇಕಾದದ್ದಿಲ್ಲ. ಸಂಪೂರ್ಣವಾದ ಆವೇಶಕ್ಕೆ ಸ್ವತಂತ್ರ ಮಾರ್ಗ ಸಹಜವಾಗಿ ಬರುವುದು. ಉಳಿದ ಎಲ್ಲಾ ಆವೇಶಕ್ಕೂ ಸಿದ್ಧಾಂತಮಾರ್ಗವೇ ಸರಿ. ಎಂದರೆ ಸ್ವತಂತ್ರಮಾರ್ಗವನ್ನು ಅವಲಂಬಿಸಬೇಕಾದರೆ ಕೆಲವರು ಕವಿಗಳಿಗೆ ಮಾತ್ರ ತೊಂದರೆ ಇಲ್ಲದಿರಬಹುದು; ಅನೇಕರಿಗೆ ಅದು ಸರಿಹೋಗದು. ಅಲ್ಲದೆ ಕೆಲವು ರೂಪದ ಕಾವ್ಯದಲ್ಲಿ ಸ್ವತಂತ್ರಮಾರ್ಗ ಒಳ್ಳೆಯದೆನ್ನುವುದಕ್ಕಿಲ್ಲ. ಅಲ್ಲದೆ ಕೆಲವು ರೂಪದಲ್ಲಿ ಸರಿಹೋಗುವುದು ; ಸಿದ್ಧಾಂತಮಾರ್ಗವೇ ಸರಿ. ಕವಿಯ ಆತ್ಮದ ಅನುಭವವಿಶೇಷದ ಸಾರವನ್ನು ವ್ಯಂಜಕ ಕಾವ್ಯವಾಗಿ ಹೇಳುವಲ್ಲಿ, ಎಂದರೆ ಲಿರಿಕ್ ಜಾತಿಯ ಕೃತಿಗಳಲ್ಲಿ ಆವೇಶವೇ ಮುಖ್ಯವಾದದ್ದರಿಂದ ಸ್ವತಂತ್ರಮಾರ್ಗವು ಸ್ವಭಾವಜನ್ಯ. ಉಳಿದ ಹಾಗೆ ಉಪನ್ಯಾಸ, ಕತೆ ನಾಟಕ ಮೊದಲಾದ ರೂಪಗಳಲ್ಲಿ ರಾಗದ ಅಧಿಕಾರದ ಜೊತೆಗೆ ಬುದ್ಧಿಯ ಅಧಿಕಾರವೂ ಹೆಚ್ಚುಹೆಚ್ಚಾಗಿ ಮಿಳಿತವಾಗುತ್ತ ಬಂದ ಹಾಗೆ ಸಿದ್ಧಾಂತ ಪದ್ಧತಿ ಕ್ಷೇಮಕರವಾಗಿ ತೋರುವುದು. ಸ್ವತಂತ್ರ ಪದ್ಧತಿಯಲ್ಲಿ ಉತ್ತಮನಾದ ನಾಟಕವಾಗುವುದಿಲ್ಲವೆಂದಲ್ಲ. ಪ್ರಪಂಚದ ನಾಟಕಗಳಲ್ಲಿ ಅತ್ಯುತ್ತಮಗಳಾದ ಕೆಲವನ್ನು ಬರೆದ ಷೇಕ್ಸ್‌ಪಿಯರ್ ಕವಿ ಯಾವ ಸಿದ್ಧಾಂತದ ಮಾರ್ಗವನ್ನು ಅವಲಂಬಿಸಲಿಲ್ಲ. ಆದರೆ ಅವನು ಅಂಥ ಮಾರ್ಗವನ್ನೂ ಸ್ವಲ್ಪ ಯೋಚಿಸಿ ಅವಲಂಬಿಸಿದ್ದರೆ ಅವು ಇನ್ನೆಂಥ ನಾಟಕಗಳಾಗುತ್ತಿದ್ದವೋ ಎಂದು ಕೆಲವರು ಹೇಳಿದ್ದಾರೆ. ಗ್ರೀಕರ ನಾಟಕಗಳೊಂದೆರಡನ್ನು ಭಾಷಾಂತರದಲ್ಲಿ ನೋಡಿದರೆ ಈ ವಾಂಛೆ ಮತ್ತಷ್ಟು ಹೆಚ್ಚುವುದು. ಷೇಕ್ಸ್‌ಪಿಯರ್ ಕವಿಯಲ್ಲಿ ಕಾಣುವ ಆವೇಶಕ್ಕಿಂತ ಕಡಮೆಯಾದ ಆವೇಶದಿಂದ ಅವನ ನಾಟಕಗಳಿಗಿಂತ ಹೆಚ್ಚಾದ ರಚನಶುದ್ಧಿ ರಸಸಾಮಂಜಸ್ಯ ಉಳ್ಳ ನಾಟಕಗಳನ್ನು ಗ್ರೀಕ್ ಕವಿಗಳು ಬರೆದಿದ್ದಾರೆ.

ನಮ್ಮ ಮಹಾಕವಿ ಕಾಳಿದಾಸನ ಶಾಕುಂತಲವನ್ನು ಓದಿದರೂ ಷೇಕ್ಸಪಿಯರ್ ಯಾವ ನಾಟಕದಲ್ಲೂ ಇಲ್ಲದ ರಚನಶುದ್ಧಿಯೂ ರಸಸಾಮಂಜಸ್ಯವೂ ಕಾಣುವುವು. ಉಳಿದ ಕವಿಗಳು ಒಂದೊಂದು ಸಲ ಏರುತ್ತಿದ್ದ ಆವೇಶದ ಅಂತಸ್ತಿನಲ್ಲಿ ಷೇಕ್ಸ್‌ಪಿಯರ್ ಕವಿ ಸರ್ವದಾ ಇರುತ್ತಿದ್ದಂತೆ ಅವನ ಕೊನೆಯ ನಾಟಕಗಳಿಂದ ತಿಳಿಯುತ್ತದೆ. ಆ ಅಂತಸ್ತು ಉಳಿದವರಿಗೆ ಯಾತ್ರಾಸ್ಥಾನ. ಅವನಿಗೆ ಅದೇ ಊರು. ಇತರರಿಗೆ ಪ್ರಯತ್ನಪೂರ್ವಕವಾಗಿ ಬರುತ್ತಿದ್ದ ಕಲಾಕೌಶಲ್ಯವೂ ಚರ್ಯನಿರೂಪಣವೂ ಅವನಿಗೆ ಸ್ವಭಾವದ ಸಾಮಾನ್ಯ ಸ್ಥಿತಿಯಲ್ಲಿ ಬರುತ್ತಿದ್ದವು. ಈಗಲೂ ಇತರ ನಾಟಕಗಳು ಅವನ ನಾಟಕಕ್ಕಿಂತ ಚೆನ್ನಾಗಿ ಕಂಡರೂ ಅದರ ಕಾರಣ ಅವನ ಕೆಲಸದಲ್ಲಿ ಪ್ರಯತ್ನ ಕಾಣದೆ ಇತರರ ಕೆಲಸದಲ್ಲಿ ಕಾಣುವುದೇ. ಬೆವರದ ಬಲಿಷ್ಠನು ಮಾಡುವ ಕೆಲಸ ಬೆವರುವ ದುರ್ಬಲನ ಕೆಲಸಕ್ಕಿಂತ ಕಡಿಮೆಯಲ್ಲದಿದ್ದರೂ ಬೆವರುವವನ ಕೆಲಸವೇ ಹೆಚ್ಚೆಂಬಂತೆ ನಮಗೆ ತೋರುವುದು. ಹೀಗೆ ಷೇಕ್ಸ್‌ಪಿಯರ್ ಕಾವ್ಯದಲ್ಲಿ ಯತ್ನವು ಕಣ್ಣಿಗೆ ಬೀಳದೆ ಇರುವುದರಿಂದ ಕೆಲಸ ಎಷ್ಟು ಉನ್ನತವಾದದ್ದೆಂದು ನಮಗೆ ತಿಳಿಯುವುದಿಲ್ಲ. ಅವನ ಸಾಮಾನ್ಯ ಕವನ ಇತರ ಉನ್ನತ ಕವನಕ್ಕಿಂತ ಎತ್ತರದಲ್ಲಿರತಕ್ಕದ್ದು. ಇಂಥ ಕವಿ ಪ್ರಯತ್ನಪೂರ್ವಕವಾಗಿ ರಸಸಾಮಂಜಸ್ಯಕ್ಕೆ ಮನಸ್ಸನ್ನು ಕೊಟ್ಟಿದ್ದರೆ ಇನ್ನೂ ಹೇಗೆ ಬರೆಯಬಹುದಾಗಿತ್ತೋ ಎಂದು ತೋರುವುದು ತಪ್ಪಲ್ಲ. ಇಂಥ ಮಹಾಕವಿಯೂ ಸಿದ್ಧಾಂತಮಾರ್ಗವನ್ನು ಅವಲಂಬಿಸಬೇಕಾದ ಕಡೆ ಸ್ವತಂತ್ರಮಾರ್ಗವನ್ನು ಅವಲಂಬಿಸಿದ್ದರಿಂದ ಕಾವ್ಯದಲ್ಲಿ ಸೊಗಸು ಕಡಮೆಯಾಯಿತೆನ್ನಬಹುದಾದರೆ ಸಾಮಾನ್ಯರು ಈ ವಿಷಯದಲ್ಲಿ ಎಷ್ಟು ಜಾಗ್ರತೆಯಿಂದ ನಡೆದುಕೊಳ್ಳಬೇಕು ಎಂಬುದನ್ನು ಹೇಳಬೇಕಾದದ್ದಿಲ್ಲ.

## ೨೬. ಫಲಿತಾಂಶ

ವಿಷಯವೂ ಸಾಹಿತ್ಯದ್ದಾಗಿ ರೂಪು ಸಾಹಿತ್ಯದ ರೂಪವಾಗಿರುವ ಗ್ರಂಥದ ವಿಚಾರದಲ್ಲಿ ಇದುವರೆಗೆ ಹೇಳಿರುವ ಮಾತೆಲ್ಲ ಸಲ್ಲುವುದು. ಗ್ರಂಥ

ಳ್ಳೆಯದಾಗಬೇಕಾದರೆ ಅದು ಕವಿಯ ಜೀವನದ ನಿಜವಾದ ಅನುಭವಕ್ಕೆ ಅಥವಾ
ಳುವಳಿಕೆಗೆ ಸಂಬಂಧಪಟ್ಟುದಾಗಿರಬೇಕು. ಅವನ ಜೀವನ ಒಳ್ಳೆಯದಾಗಿದ್ದು
ಅವನ ಜನಾಂಗದ ಜೀವನದಲ್ಲಿ ಯೋಗ್ಯವಾದ ಸ್ಥಾನವನ್ನು ಉಳ್ಳುದಾಗಿ
ರಬೇಕು. ಹೀಗಿದ್ದಲ್ಲಿ ಅದರ ಸಾಮಗ್ರಿ ಒಳ್ಳೆಯದಾಗಿರುವುದು ಸಾಧ್ಯ.
ಾವ್ಯದ ರೂಪವು ಸಾಮಗ್ರಿಗೆ ತಕ್ಕುದಾಗಿರಬೇಕು. ಪದ್ಧತಿ ವಿಷಯರೂಪಗಳ
ೕರೆಯನ್ನು ಅತಿ ಕ್ರಮಿಸಬಾರದು. ವ್ಯಂಜಕ ಕಾವ್ಯವಾದರೂ ಇತರ
ಾವ್ಯವಾದರೂ ಹೆಚ್ಚು ಮಾತಿಲ್ಲದೆ ಮಿತವಾದ ಮಾತಿನಿಂದ ತುಂಬಿದ ಭಾವವನ್ನು
ಳಿಸಬೇಕು. ಮಿತವಾದ ಮಾತಿನಿಂದಲಾದರೂ ಭಾವವು ಸ್ಪಷ್ಟವಾಗಿರಬೇಕು.
ೀಗೆ ಬರೆದ ಗ್ರಂಥ ಒಳ್ಳೆಯ ಗ್ರಂಥ. ಎಂದರೆ ಈ ಶಾಸನವನ್ನೆಲ್ಲಾ ಓದುವ
ಾವು ಬರೆಯುವ ಇನ್ನೊಬ್ಬನಲ್ಲಿ ಮಾಡಬೇಕೆಂದಲ್ಲ. ಬರೆಯುವವನೇ ಈ
ಷಯಗಳನ್ನು ಚೆನ್ನಾಗಿ ಯೋಚಿಸಬೇಕು. ಯೋಚಿಸಿ ಬರೆದಲ್ಲಿ ಅಂಥ ಒಳ್ಳೆಯ
ೀವನದ ಫಲವಾದ ಕಾವ್ಯ ಈ ಯೋಚನೆಯಿಂದೆಲ್ಲ ಪರಿಷ್ಕಾರವಾದ
ೂಪಮಾರ್ಗಗಳಿಂದ ಉತ್ತಮವಾದ ಕಾವ್ಯವಾಗಿ ಸಾಹಿತ್ಯದ ಮುಖ್ಯ ಲಕ್ಷಣವಾದ
ೌಂದರ್ಯವನ್ನು ಮಾನವನಿಗೆ ಜಯಿಸಿಕೊಡುವುದು. ಹೀಗೆ ಮಾಡುವುದರಲ್ಲಿ
ಾವ್ಯವು ಕವಿಯ ಜನಕ್ಕೂ ಪ್ರಾಯಶಃ ಇತರ ಮಾನವರಿಗೂ, ನೀತಿಯನ್ನೂ
ಧಿಸಿ ಕೊಡುವುದು. ಅಂಥ ಕಾವ್ಯ ತನ್ನ ಸಾಹಿತ್ಯದಲ್ಲಿ ಮಾತ್ರವಲ್ಲದೆ. ಪ್ರಪಂಚದ
ಲ್ಲಾ ಸಾಹಿತ್ಯದ ಮಧ್ಯೆ ಒಂದು ಉನ್ನತಸ್ಥಾನಕ್ಕೆ ಅಧಿಕಾರಿಯಾಗುವುದು.
ಾನವ ವರ್ಗವು ತನ್ನ ಜೀವನದಲ್ಲಿ ಎಡೆಬಿಡದೆ ನಿರ್ಮಿಸುತ್ತಿರುವ ದೇವದೇವನ
ಕ್ತರೂಪವಾದ ಚರಿತ್ರಸೌಧದ ಕಟ್ಟಡದಲ್ಲಿ ಒಂದು ಸ್ತಂಭವಾಗಿ ನೆಲೆಸಿ ಆ
ಧವು ಭದ್ರವಾಗಿರುವುದಕ್ಕೆ ತಾನೂ ಕಾರಣವಾಗುವುದು. ಇದು ಉತ್ತಮ
ವ್ಯವಿರಬೇಕಾದ ರೀತಿ, ಕಾವ್ಯವನ್ನು ಬರೆಯುವನು ಪ್ರಾಯಶಃ ಇಂಥ ಆಸೆಯನ್ನು
ಟ್ಟುಕೊಂಡು ಬರೆಯಬೇಕು. ಇಂಥ ಕಾವ್ಯವೇ ಓದುವವನಿಗೆ ಸಿಕ್ಕಿದರೆ ಅದೂ
ಳ್ಳೆಯದೆ. ಆದರೆ ಇಷ್ಟು ಉತ್ತಮವಾಗಬೇಕಾದರೆ ಇದುವರೆಗೆ ಬಹಳ ಕಾವ್ಯ
ರಲಾರದು, ಇನ್ನು ಮೇಲೆ ಬಹಳ ಬರಲಾರದು. ಮನುಷ್ಯನ ಕೆಲಸದಲ್ಲಿ

ಕೊರತೆಯಿಲ್ಲದೆ ಹೋಗುವುದಿಲ್ಲ, ದೋಷವೇ ಇಲ್ಲದಿರುವುದು ಮನುಷ್ಯನ ಆಶೆಯಲ್ಲಿ ಮಾತ್ರ. ಆದದ್ದರಿಂದ ಕೊರತೆಯಿಲ್ಲದೆ ಇಂಥ ಉತ್ತಮ ಕಾವ್ಯಗಳನ್ನೇ ಮನಸ್ಸಿನಲ್ಲಿಟ್ಟುಕೊಂಡು, ಬರೆಯುವವನು ಬರೆಯದೆಯೇ, ಓದುವವನು ಓದದೆಯೇ, ಇರುವುದಕ್ಕಾಗುವುದಿಲ್ಲ. ಬರೆಯುವವನು ತನಗೆ ಸಾಧ್ಯವಾದಷ್ಟು ಉತ್ತಮ ಗ್ರಂಥಗಳನ್ನು ಬರೆಯಬಹುದು. ಓದುವವನು ಸಿಕ್ಕಿದ್ದರಲ್ಲಿ ಉತ್ತಮವಾದ ಗ್ರಂಥವನ್ನು ಓದಬೇಕು. ಭಗವಂತನು ಸೃಷ್ಟಿಯಲ್ಲಿ ಕೇವಲ ಋಷಿಗಳನ್ನೇ ಮಾಡಲಿಲ್ಲ. ಮುಕ್ತಿ ಕೊಡುವಲ್ಲಿ ನಿರ್ದೋಷಿಗಳನ್ನೇ ಹುಡುಕಲಿಲ್ಲವೆಂದೂ ಕಾಣುತ್ತದೆ ; ಉತ್ತಮದರ ಜೊತೆಗೆ ಉತ್ತಮವಲ್ಲದುದು ಅನೇಕವನ್ನು ನಿರ್ಮಿಸಿದ್ದಾನೆ. ಅಲ್ಲದೆ ಕಾವ್ಯದ ಸಾಮಗ್ರಿ ಯಾವಾಗಲೂ ಉತ್ತಮವಾದುದಾಗಿಯೇ ಇರಬೇಕು. ಎಂದರೆ ಸಣ್ಣ ವಿಷಯವೇ ಕೂಡದು ಎಂತ ಅಲ್ಲ. ಕವಿಯ ಭಾವ ಸರಿಯಾಗಿರಬೇಕು ಎಂದು ಅಭಿಪ್ರಾಯ, ವಿಷಯ ಸಣ್ಣದಾದರೆ ಅದಕ್ಕೆ ತಕ್ಕಂತೆ ಮಾತ್ರ ಇರಬಹುದು. ಒಂದು ಮನೆಯ ವಿಷಯ ಬರೆದರೂ ಒಂದು ನಕ್ಷತ್ರದ ವಿಷಯ ಬರೆದರೂ ವರ್ಣನೆ ಒಂದೇ ವಿಧವಾಗಿರುವುದು ಸಾಧ್ಯವಲ್ಲ. ನಮ್ಮ ಜೀವನದಲ್ಲಿ ಸಣ್ಣ ವಿಷಯ ದೊಡ್ಡ ವಿಷಯ ಇರುವಂತೆ ಕಾವ್ಯದ ವಸ್ತುವೂ ಸಣ್ಣದಾಗಿರಬಹುದು ದೊಡ್ಡದಾಗಿರಬಹುದು. ಆದದ್ದರಿಂದ ಬರೆಯುವವನು ತನಗೆ ಸಾಧ್ಯವಾದಷ್ಟು ಉತ್ತಮ ವಿಷಯವನ್ನು ಉತ್ತಮವಾದ ರೀತಿಯಲ್ಲಿ ಬರೆದರೆ ಓದುವವನು ಅದರಿಂದ ಸಾಧ್ಯವಾದಷ್ಟು ಸಂಸ್ಕಾರವನ್ನು ಪಡೆದುಕೊಳ್ಳಬೇಕು, ಎಂದರೆ ಸಾಮಗ್ರಿ ರೂಪ ಮೊದಲಾದುವುಗಳ ವಿಷಯವನ್ನು ತಿಳಿದುಕೊಳ್ಳುವುದು ; ಗ್ರಂಥ ಒಳ್ಳೆಯದೇ ಕೆಟ್ಟದೇ, ಇದರಲ್ಲಿ ಎಷ್ಟು ದೋಷವಿದೆ, ಎಂದು ತೀರ್ಮಾನ ಮಾಡುವುದಕ್ಕಾಗಿಯೇ ಅಲ್ಲ. ಗ್ರಂಥ ಒಳ್ಳೆಯದಲ್ಲದೆ ಇದ್ದರೆ ಇದನ್ನು ಮಾಡಿ ಆ ಗ್ರಂಥವನ್ನು ಒಂದು ಕಡೆಗಿಡುವುದಕ್ಕೂ ಆ ತಿಳಿವು ಉಪಯೋಗಕ್ಕೆ ಬರುತ್ತದೆ. ಆದರೆ ಈ ತಿಳಿವಿನ ಮೊದಲ ಉಪಯೋಗ ಈ ತೀರ್ಮಾನದ ಅಧಿಕಾರವಲ್ಲ. ಸಾಮಾನ್ಯವಾದುದಾದರೂ ಒಳ್ಳೆಯ ರೀತಿಯ ಗ್ರಂಥ ಒಂದರಿಂದ ಸುಖವನ್ನು

ಪಡೆಯುವ ಶಕ್ತಿಯನ್ನು ಸಂಪಾದಿಸುವುದೇ ಈ ಉಪಯೋಗ. ಪ್ರಪಂಚದಲ್ಲಿರುವ ಸೊಗಸನ್ನೆಲ್ಲ ಬಿಟ್ಟು ಚಂದ್ರನಲ್ಲಿರುವ ಕಳಂಕವನ್ನು ನೋಡುವುದಕ್ಕೆ ಸುಲೋಚನವನ್ನು ತೆಗೆದುಕೊಳ್ಳುವವರುಂಟೆ? ಹೀಗೆ ಗ್ರಂಥಕರ್ತರು ಈ ವಿಷಯವನ್ನು ಯೋಚಿಸಿ ಬರೆದು ಪಾಠಕರು ಈ ವಿಷಯವನ್ನು ಯೋಚಿಸಿ ಓದಿದರೆ ಬರಬರುತ್ತ ಉತ್ತಮವಾದ ಗ್ರಂಥಗಳ ಸಂಖ್ಯೆ ಹೆಚ್ಚುವುದರಲ್ಲಿ ಸಂದೇಹವಿಲ್ಲ. ಸಾಹಿತ್ಯವು ಸ್ವರೂಪದಲ್ಲಿ ಜ್ಯೋತಿರ್ಮಯ ಮೂರ್ತಿ. ಅದಕ್ಕೆ ಸೇರುವ ಒಂದೊಂದು ನಿಜವಾದ ಮಾತೂ ಒಂದೊಂದು ನಕ್ಷತ್ರದ ಬೆಳಕನ್ನೋ ಒಂದೊಂದು ದೀಪದ ಬೆಳಕನ್ನೋ ಅದರ ಪ್ರತಿಭೆಗೆ ಸೇರಿಸುವುದು. ಬಂದದ್ದೆಲ್ಲ ಬೆಳಕೇ ಅಲ್ಲದೆ ದೀಪದ ಬೆಳಕು ನಕ್ಷತ್ರದ ಬೆಳಕಿಗಿಂತ ಕಡಮೆಯದಾದರೂ ಅದಕ್ಕಿಂತ ಒಂದು ವಿಧದಲ್ಲಿ ಹೆಚ್ಚು ಅನುಕೂಲವಾದದ್ದು. ದೀಪದಿಂದ ಇನ್ನೊಂದು ದೀಪವನ್ನು ಹಚ್ಚಿಕೊಳ್ಳಬಹುದು ; ನಕ್ಷತ್ರದಿಂದ ಇನ್ನೊಂದು ನಕ್ಷತ್ರವನ್ನು ಹಚ್ಚಿಕೊಳ್ಳುವ ಆಸೆ ಇಲ್ಲ. ಈ ರೀತಿಯಲ್ಲಿ ಕವಿಯಿಂದ ಕವಿ ಕಾವ್ಯದ ವಿಚಾರವನ್ನು ಕಲಿತು ಬರೆಯುವುದರಿಂದಲೂ ತಲೆಮಾರಿನಿಂದ ತಲೆಮಾರಿಗೆ ಜನ ಹೆಚ್ಚು ತಿಳಿವಿನಿಂದ ಗ್ರಂಥವನ್ನು ಪಠಿಸುವುದರಿಂದಲೂ ಜನಾಂಗ ಏಳ್ಗೆಗೆ ಬಂದು, ಸಾಹಿತ್ಯವನ್ನು ಮಾನವವರ್ಗವೆಲ್ಲದರ ಯಾವ ಒಂದು ಅನ್ವೇಷಣದ ಭಾಗವೆಂದು ಹೇಳಿದೆಯೋ ಆ ಅನ್ವೇಷಣದಲ್ಲಿ ಮುಂದುವರಿದು, ತನ್ನ ಕರ್ತವ್ಯವನ್ನು ತಾನು ನೆರವೇರಿಸುವುದಕ್ಕೆ ದೃಢ ಪ್ರಯತ್ನವನ್ನು ಮಾಡಿದಂತಾಗುವುದು.

# VI

## ೨೭. ಉಪಸಂಹಾರ

ಈ ಉಪನ್ಯಾಸವನ್ನು ಇಲ್ಲಿಗೆ ಮುಗಿಸಬಹುದು. ಈಗ ನಮ್ಮ ಜನಾಂಗದ ಜೀವನದಲ್ಲಿ ಒಂದು ಹೊಸ ಯುಗ ಆರಂಭವಾಗಿದೆ. ನಮ್ಮ ಸಾಹಿತ್ಯದಲ್ಲಿಯೂ ಇದು ಒಂದು ಹೊಸ ಯುಗದ ಆರಂಭ. ಈ ಸಂದರ್ಭದಲ್ಲಿ ಸಾಹಿತ್ಯದ ವಿಷಯವಾಗಿ ಈ ಉಪನ್ಯಾಸದ ಮೊದಲಲ್ಲಿ ಹೇಳಿದಂತೆ ಕೆಲವು ಮೂಲ ತತ್ವಗಳ ತಿಳಿವು ಜನಾಂಗದಲ್ಲಿ ಹರಡಬೇಕಾದದ್ದು ಆವಶ್ಯಕ. ಸಾಹಿತ್ಯ ವಿಷಯಕವಾದ ಸಮಾರಂಭಗಳಲ್ಲೆಲ್ಲ ಇವುಗಳಲ್ಲಿ ಒಂದಲ್ಲದಿದ್ದರೆ ಇನ್ನೊಂದನ್ನು ಕುರಿತು ಜನರು ಚೆನ್ನಾಗಿ ಯೋಚಿಸಿ ಕೆಲಸ ಮಾಡಬೇಕಾಗುವುದು. ಉತ್ತಮ ಸಾಹಿತ್ಯವು ಜನಾಂಗ ಜೀವನದ ಸಮೀಚೀನತೆಯ ಅವಶ್ಯ ಲಕ್ಷಣವೆಂದರಿತು ಜನರೆಲ್ಲ ಅಂಥ ಸಾಹಿತ್ಯವು ಸಾಧ್ಯವಾಗುವಂತೆ ಪ್ರಯತ್ನಮಾಡಬೇಕು. ಸಾಹಿತ್ಯದ ಕಾರ್ಯವು ಅತ್ಯುನ್ನತವಾದುದೆಂದೂ ಆದುದರಿಂದ ಜನಾಂಗದ ಜೀವನದ ಈ ಭಾಗಕ್ಕಿಂತ ಇನ್ನು ಯಾವ ಭಾಗಕ್ಕಾಗಲಿ ಹೆಚ್ಚು ಗಮನವನ್ನು ಕೊಟ್ಟು ಇದನ್ನು ನಿರಾಕರಿಸುವುದು ಜನಾಂಗದ ಅಪ್ರಬುದ್ಧತೆಯನ್ನು ತೋರಿಸುತ್ತದೆಯೆಂದೂ ಜನರು ತಿಳಿಯಬೇಕು. ಸಾಹಿತ್ಯಾನುಷ್ಠಾನವು ಒಂದು ರೀತಿಯ ಯೋಗವೆಂದೂ ಗ್ರಂಥವನ್ನು ರಚಿಸುವವನು ತನ್ನ ಜೀವನವನ್ನು ಒಳ್ಳೆಯದನ್ನಾಗಿ ಮಾಡಿಕೊಳ್ಳಬೇಕೆಂದೂ ಉತ್ತಮ ಗ್ರಂಥರಚನೆಗೆ ಒಂದು ರೀತಿಯ ಆತ್ಮ ಸಂಯಮವೂ ಮನಶ್ಶುದ್ಧಿಯೂ ಕರ್ತವ್ಯನಿಷ್ಠೆಯೂಬೇಕೆಂದೂ ಗ್ರಂಥಕರ್ತರೆಲ್ಲ ತಿಳಿದು ಕಾವ್ಯ ರಚನಾಧಿಕಾರವನ್ನು ಸಂಪಾದಿಸುವುದಕ್ಕೆ ತಕ್ಕ ಯತ್ನವನ್ನು ಮಾಡಬೇಕು. ಸಾಹಿತ್ಯವು ಸೌಂದರ್ಯದ ಭೃತ್ಯವೃತ್ತಿಯನ್ನು ವಹಿಸಿದೆ ಎಂಬುದನ್ನೂ ಅದನ್ನು ಈ ಕೆಲಸದಿಂದ ಬೇರೆ ಕಡೆಗೆ ತಿರುಗಿಸುವುದೂ, ತಿರುಗಬೇಕೆಂದು ಹೇಳುವುದೂ, ತಪ್ಪೆಂಬುದನ್ನು ಗ್ರಂಥಕರ್ತರೂ ವಿಮರ್ಶಕರೂ ತಿಳಿಯಬೇಕು. ಸಾಹಿತ್ಯದಲ್ಲಿ

ಭಾವಸೌಷ್ಠವವಲ್ಲದೆ ಆಕಾರಸೌಷ್ಠವವೂ ಇರಬೇಕೆಂಬುದನ್ನೂ ಗ್ರಂಥಕರ್ತರು ತಿಳಿಯಬೇಕು. ಉತ್ತಮ ಗ್ರಂಥವನ್ನು ಕವಿಯೊಬ್ಬನು ಬರೆದರೆ ಸಾಹಿತ್ಯವು ಕೃತಾರ್ಥವಾಗಲಿಲ್ಲ, ಅದನ್ನು ಜನರು ಓದಿ ಅದರ ರಸವು ಸಾವಿರ ಹೃದಯದಲ್ಲಿ ಸಾವಿರ ಮಡಿಯಾದಾಗ್ಗೆ ಅದು ಸಾರ್ಥಕವಾಗುವುದು, ಎಂಬುದನ್ನು ನಾವೆಲ್ಲರೂ ತಿಳಿಯಬೇಕಾಗಿದೆ. ನಮ್ಮ ಸಾಹಿತ್ಯದಲ್ಲಿ ಇಂಥ ವಿಷಯಗಳನ್ನು ತಿಳಿಸುವ ಗ್ರಂಥಗಳು ಹಿಂದೆ ರಚಿತವಾದುವು ಇವೆ. ಅವೆಲ್ಲ ಬಹುಮಟ್ಟಿಗೆ ಸಂಸ್ಕೃತದಲ್ಲಿವೆ. ಅಲ್ಲದೆ ಆ ಗ್ರಂಥಗಳೂ ಕನ್ನಡದಲ್ಲಿರುವುವೂ ವಿಶೇಷವಾಗಿ ಲಕ್ಷಣವನ್ನು ಕುರಿತವೇ ಹೊರತು ಈ ರೀತಿ ಸಾಮಾನ್ಯ ವಿಷಯಗಳನ್ನು ಕುರಿತುವಾಗಿಲ್ಲ. ಈಗ ಸಾಹಿತ್ಯ ಸಾರ್ವಜನಿಕ ವಿಷಯಗಳನ್ನು ಕುರಿತವಾಗಿಲ್ಲ. ಈಗ ಈ ವಿಷಯಗಳ ತಿಳಿವು ಪ್ರಚಾರವಾಗಬೇಕಾದದ್ದು ಬಹಳ ಅವಶ್ಯಕ. ಇವುಗಳ ವಿಷಯದಲ್ಲಿ ಚರ್ಚೆ ನಡೆದು ಮುಖ್ಯ ತತ್ವಗಳ ವಿಷಯದಲ್ಲಿ ಸರಿಯಾದ ಅಭಿಪ್ರಾಯಗಳು ನಿರ್ಧಾರವಾಗಿ ಸ್ಥಾಪನವಾಗುವುದೂ ಅವಶ್ಯಕ. ಇಂಥ ಚರ್ಚೆಗೆ ವಿಷಯವಾದ ಕೆಲವು ಮುಖ್ಯ ತತ್ವಗಳನ್ನು ಈ ಉಪನ್ಯಾಸದಲ್ಲಿ ವಿವರಿಸಿ ಹೇಳಿದೆ. ಚರ್ಚೆಯನ್ನು ಈ ಉಪನ್ಯಾಸದಲ್ಲಿ ಮುಗಿಸಿದೆಯೆಂದು ಸರ್ವಥಾ ನನ್ನ ಅಭಿಪ್ರಾಯವಲ್ಲ. ಇಲ್ಲಿ ಹೇಳಿರುವ ವಿಷಯವನ್ನೇ ಇನ್ನೂ ವಿಸ್ತಾರವಾಗಿ ಹೇಳಬಹುದಾಗಿತ್ತು. ಸಾಹಿತ್ಯಕ್ಕೆ ಸಂಬಂಧಪಟ್ಟುವಾದರೂ ಇಲ್ಲಿ ಹೇಳದೆ ಇರುವ ಇತರ ಅನೇಕ ಅಂಶಗಳು ಇವೆ. ಅವುಗಳನ್ನು ಕುರಿತೂ ಕೆಲವು ಮಾತುಗಳನ್ನು ಹೇಳಬಹುದಾಗಿತ್ತು. ಆದರೆ ಸಾಹಿತ್ಯದ ಏಳ್ಗೆಗೆ ಸಾಧನಗಳನ್ನು ಕುರಿತು ಯೋಚಿಸುವುದರಲ್ಲಿ ಪ್ರಧಾನವಾದ ಬೇಕಾಗುವ ವಿಷಯಗಳನ್ನು ಮಾತ್ರ ಸಂಕ್ಷೇಪವಾಗಿ ಚರ್ಚಿಸಬೇಕೆಂದು ಉದ್ದೇಶಿಸಿ ಈ ಉಪನ್ಯಾಸವನ್ನು ಮಾತ್ರ ಆರಂಭಿಸಿದ್ದರಿಂದ ಹೇಳಿದ ವಿಷಯವನ್ನು ಕುರಿತು ಇಲ್ಲಿ ಏನನ್ನು ಹೇಳದೆ ಬಿಟ್ಟಿದೆ. ಈ ಉಪನ್ಯಾಸವನ್ನು ಓದುವುದರಿಂದ ಕೆಲವರು ವಿಮರ್ಶಕರಾಗದವರೂ ಗ್ರಂಥಗಳ

ಉದ್ದೇಶವನ್ನು ವಿಚಾರಿಸುವುದಲ್ಲಿ ಮೊದಲಿಗಿಂತ ಹೆಚ್ಚು ಸಹಾನುಭೂತಿಯನ್ನು ತೋರಿಸಿ. ಕೆಲವರು ಪಾಠಕರಾದರೂ ಒಂದೆರಡು ಗ್ರಂಥಗಳನ್ನು ಓದುವಲ್ಲಿ ಮೊದಲಿಗಿಂತ ಸ್ವಲ್ಪ ಹೆಚ್ಚಾಗಿ ಭಾವಗಳನ್ನು ಗ್ರಹಿಸಿ, ನಮ್ಮ ಜನರಲ್ಲಿ ಎಷ್ಟರವಟ್ಟಿಗಾದರೂ ಸಾಹಿತ್ಯದ ವಿಷಯದಲ್ಲಿಯೂ ಗ್ರಂಥಕರ್ತರ ವಿಷಯದಲ್ಲೂ ಎತ್ತಿ ಚರ್ಚೆಮಾಡಿ ಸಾಧು ಭಾವಗಳನ್ನು ನಿರ್ಧರಗೊಳಿಸುವುದಕ್ಕೆ ಯತ್ನಮಾಡುವಂತಾಗಿ ಈ ಉಪನ್ಯಾಸ ನಮ್ಮ ಸಾಹಿತ್ಯದ ಏಳ್ಗೆಯ ಮಹಾಕಾರ್ಯದಲ್ಲಿ ಅಳಿಲು ತಂದ ಧೂಳಿನಂತೆ ಸ್ವಲ್ಪವಟ್ಟಿಗಾದರೂ ಸಹಾಯಕವಾದರೆ ಇದರ ಉದ್ದೇಶವು ಸಿದ್ಧಿಸಿದಂತೆಯೇ ಸರಿ.





